*KOLATADA PADAGALU*—Collected and Edited by Dr. Basavaraja Malashetty. Published by the Kannada Sahitya Parishat, Chamarajapet, Bangalore-18. Size Demy Octavo, Pages viii + 98. Price Rs. 2-00



ಪ್ರಕಾಶಕರು

ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-೧೮

ಬೆಲೆ. ಎರಡು ರೂಪಾಯಿ

ಮುದ್ರಕರು

ಶ್ರೀ ಭಗವಾನ್ ಇಂಡಸ್ಟ್ರೀಸ್,
81-82, ಗಾಂಧಿಬಜಾರ್ ಬೆಂಗಳೂರು-560 004.
1೯೮1

# ಮುನ್ನುಡಿ

ಕನ್ನಡನಾಡಿನ ಬೇರೆ ಬೇರೆ ಭಾಗಗಳು ಒಂದು ಆಡಳಿತಕ್ಕೆ ಒಳಪಟ್ಟು ಕರ್ನಾಟಕ ಏಕೀಕರಣವಾಗಿ ೨೫ ವರ್ಷಗಳು ಈ ವರ್ಷದ ನವೆಂಬರ್ ತಿಂಗಳಿಗೆ ತುಂಬುತ್ತದೆ. ಕರ್ನಾಟಕ ರಾಜ್ಯೋತ್ಸವದ ರಜತೋತ್ಸವವನ್ನು ಈ ವರ್ಷ ವಿಜೃಂಭಣೆಯಿಂದ ಎಲ್ಲೆಡೆಗಳಲ್ಲೂ ಆಚರಿಸಲಾಗುತ್ತಿದೆ.

ಕರ್ನಾಟಕ ಏಕೀಕರಣದ ಬೆಳ್ಳಿ ಹಬ್ಬವನ್ನು ಕನ್ನಡ ಸಾಹಿತ್ಯ ಪರಿಷತ್ತು ವ್ಯಾಪಕವಾಗಿಯೂ ವ್ಯವಸ್ಥಿತವಾಗಿಯೂ ಈ ವರ್ಷ ಆಚರಿಸುತ್ತಿದೆ. ಆದರ ಸಂಬಂಧವಾಗಿ "ಬೆಳ್ಳಿ ಬಿಟ್ಟ ಬಳ್ಳಿ" ಎಂಬ ಹೆಸರಿನ ಒಂದು ಹೊಸ ಪ್ರಕಟನ ಮಾಲೆಯನ್ನು ಪರಿಷತ್ತು ಕೈಗೊಂಡಿದೆ. ಈ ಮಾಲೆಯಲ್ಲಿ ಒಂದು ನೂರಕ್ಕಿಂತ ಹೆಚ್ಚು ಪುಸ್ತಕಗಳನ್ನು ಈ ವರ್ಷ ಪ್ರಕಟಿಸಲಾಗುತ್ತದೆ. ಸಂಶೋಧನೆ, ಜನಪದ ಸಾಹಿತ್ಯ, ಗ್ರಂಥ ಸಂಪಾದನೆ, ವಿಮರ್ಶೆ, ಡಾಕ್ಟರೇಟ್ ಪ್ರಬಂಧ ಮೊದಲಾದವನ್ನು ಈ ಮಾಲೆಯಲ್ಲಿ ಪ್ರಕಟಿಸಲಾಗುತ್ತಿದೆ. ಕರ್ನಾಟಕ ಸರ್ಕಾರದ ಉದಾರ ಸಹಾಯ ಈ ಮಾಲೆಗೆ ದೊರೆತಿರುವುದರಿಂದ ಈ ಮಾಲೆಯಲ್ಲಿ ಪ್ರಕಟಿಸುವ ಪುಸ್ತಕಗಳ ಬೆಲೆಯನ್ನು ಎಲ್ಲರಿಗೂ ಎಟಕುವಂತೆ ಇಡಲಾಗಿವೆ. ಕಡಿಮೆ ಬೆಲೆಯಲ್ಲಿ ಉತ್ತಮ ಗ್ರಂಥಗಳು ಕನ್ನಡಿಗರಿಗೆ ಸಿಗುವಂತೆ ಸಹಾಯ ನೀಡಿದ ಕರ್ನಾಟದ ಸರ್ಕಾರವನ್ನು ಪರಿಷತ್ತು ಕೃತಜ್ಞತೆಯಿಂದ ಸ್ಮರಿಸುತ್ತದೆ.

ಈ ಮಾಲೆಯಲ್ಲಿ ಪ್ರಕಟವಾಗುತ್ತಿರುವ 'ಕೋಲಾಟದ ಪದಗಳು' ಎಂಬ ಪುಸ್ತಕವನ್ನು ಸಿದ್ಧಪಡಿಸಿಕೊಟ್ಟವರು ಬಸವರಾಜ ಮಲಶೆಟ್ಟಿ ಅವರು. ಬಳ್ಳಾರಿ ಜಿಲ್ಲೆಯ ಹೊಸಪೇಟೆ ಸುತ್ತಮುತ್ತಿನ ಹಳ್ಳಿಗಳಲ್ಲಿ ಸಂಗ್ರಹಿಸಿದ ಕೋಲು ಪದಗಳ ಸಂಕಲನ ಈ ಕೃತಿ. ಕೋಲುಪದಗಳು ಯಾವುದೊಂದು ಮತದ ಸ್ವತ್ತಲ್ಲ, ಒಂದು ವರ್ಗದ ಸ್ವತ್ತಲ್ಲ. ಇಡೀ ಸಮಾಜದ ಸ್ವತ್ತುಗಳು. ಅವನ್ನು ಎಷ್ಟು ಸಂಗ್ರಹಿಸಿದರೂ ಸಾಲದು. ಇಂಥ ವಿಶಾಲ ಹರವನ್ನು ಪಡೆದಿರುವ ಈ ಸಂಕಲನದ ಕೋಲುಪದಗಳ ಆರಂಭದ ಸಾಲುಗಳು ಕೇಳಲು ಇಂಪಾಗಿವೆ. ಪಲ್ಲವಿ, ಅನುಪಲ್ಲವಿ, ಲಯ ಮತ್ತು ಪ್ರಾಸಗಳ ಪುನರಾವರ್ತನೆಗಳನ್ನು ಈ ಹಾಡುಗಳಲ್ಲಿ ಗುರ್ತಿಸಬಹುದು. ಕೋಲುಪದಗಳ ಹೆಗ್ಗಳಿಕೆ ಉಳಿದಿರುವುದೇ ಈ ಸಾಲುಗಳಿಂದ. ಕೋಲು ಕೊಡುವ ಕ್ರಿಯೆಗೆ ಹೊಂದಿಕೊಂಡು ಆಟಗಾರರಿಗೆ ಹುಮ್ಮಸ್ಸನ್ನು ಬರಿಸುವುದರಿಂದಲೂ ಕೇಳುಗರಿಗೆ ಆನಂದವನ್ನುಂಟುಮಾಡುತ್ತವೆ. ದೈವ, ಪ್ರಣಯ, ಹಾಸ್ಯ, ವಿಡಂಬನೆಗಳು ಇಲ್ಲಿನ ಹಾಡುಗಳ ವಸ್ತುವಾಗಿವೆ. ಒಟ್ಟಾರೆ ಪ್ರಾದೇಶಿಕ ಭಾಷೆಯ ವೈಶಿಷ್ಟ್ಯ ಮತ್ತು ಕೋಲಾಟದ ಸಾಹಿತ್ಯಕ ಅಂಶಗಳನ್ನು ಗುರ್ತಿಸುವವರಿಗೆ ಈ ಸಂಕಲನ ಉಪಯುಕ್ತವಾದುದು.

ಇದನ್ನು ಪರಿಷತ್ತಿನ ವತಿಯಿಂದ ಪ್ರಕಟಿಸಲು ಸಿದ್ಧಪಡಿಸಿಕೊಟ್ಟ ಬಸವರಾಜ ಮಲಶೆಟ್ಟಿ ಅವರಿಗೆ ಕೃತಜ್ಞತೆಗಳು.

ಹಂಪ. ನಾಗರಾಜಯ್ಯ
ಕನ್ನಡ ಸಾಹಿತ್ಯ ಪರಿಷತ್ತು ಅಧ್ಯಕ್ಷರು

# [illegible]

ಬಳ್ಳಾರಿ ಜಿಲ್ಲೆಯ ಹೊಸಪೇಟೆಯ ಸುತ್ತುಮುತ್ತಲಿನ ಹಳ್ಳಿಗಳಲ್ಲಿ ಈ ಹಾಡುಗಳನ್ನು ಸಂಗ್ರಹಿಸಲಾಗಿದೆ. ಕರ್ನಾಟಕದ-ತುಂಬೆಲ್ಲ ಪ್ರಚಾರದಲ್ಲಿರುವ ಕೋಲಾಟ ಈ ಭಾಗದ ಗಂಡಸರ ಪ್ರಮುಖ ಮನರಂಜನೆಯಾಗಿವೆ. ದಸರೆಯೊಂದು ಈ ಕೋಲಾಟಕ್ಕೆ ಹೆಚ್ಚಿನ ಕಳೆ ಏರುತ್ತದೆ. ಅಂದು ಓಣಿಓಣಿಗಳಲ್ಲಿ ಬೆಳಗಿನತನಕ ಕೋಲಾಟವಾಡುತ್ತಾರೆ. ಅದಕ್ಕಾಗಿ ಸುಮಾರು ಒಂದು ತಿಂಗಳಿಂದ ತಯಾರಿ ಮಾಡಿಕೊಂಡಿರುತ್ತಾರೆ. ಆಗಾಗ ಪೂಜೆ, ಉತ್ಸವಗಳ ಸಂದರ್ಭದಲ್ಲಿಯೂ ಕೋಲಾಟವಾಡುವುದುಂಟು.

ಇಲ್ಲಿಯ ಕೋಲಾಟದ ಎರಡು ವಿಧ :

1) ಸುತ್ತು ಕೋಲು—ವಿಲಂಬಿತ ಲಯದಲ್ಲಿ ಪದಹಾಡುತ್ತ ಅದರ ಲಯಕ್ಕೆ ತಕ್ಕಂತೆ ಕೋಲು (ಪೆಟ್ಟು) ಹಾಕುತ್ತ ತಿರುಗುವುದು ಸುತ್ತುಗೋಲು ಗುಂಪಿನ ನಾಯಕ ಹಾಡಿದ್ದನ್ನು ಇತರರು ಅನುಕರಿಸುತ್ತಾರೆ.

2) ಕೋಪಗೋಲು—ಪದ ಮುಗಿದ ಮೇಲೆ ದ್ರುತಗತಿಯಲ್ಲಿ ಕುಣಿಯುವ ಕುಣಿತ. ಈ ಸಂದರ್ಭದ ದ್ರುತ ಲಯಕ್ಕೆ ಹೊಂದುವ ಬೇರೆಬೇರೆ ಪದದ ತುಂಡುಗಳಿರುತ್ತವೆ. ಇವಕ್ಕೆ 'ಕೋಪ' ಎಂದು ಹೆಸರು.

ಮೇಳದಲ್ಲಿ ಸಾಮಾನ್ಯವಾಗಿ ಹನ್ನೆರಡು ಜನರಿರುತ್ತಾರೆ. ಈ ಸಂಖ್ಯೆ ಒಮ್ಮೊಮ್ಮೆ ಹದಿನಾರು ಹದಿನೆಂಟಕ್ಕೆ ಏರುವುದೂ ಉಂಟು. ಬಿಳಿಯ ಕಚ್ಚೆಪಂಚೆ, ಬಣ್ಣದ ಬನಿಯನ್, ತಲೆಗೆ ಬಣ್ಣದ ವಸ್ತ್ರ ಇವಿಷ್ಟು ಯೂನಿಫಾರ್ಮ್.

ಈ ಭಾಗದಲ್ಲಿ ಹಂತೀಪದ, ಹೋಳೀಪದ, ಲಾವಣಿ, ಗೀಗೀ ಮುಂತಾದವು ಇಲ್ಲವೇ ಇಲ್ಲ. ಅದ್ದರಿಂದ ಹಳ್ಳಿಯ ಗಂಡಸರು ತಮ್ಮ ಭಾವಾಭಿವ್ಯಕ್ತಿಗಾಗಿ ಪೂರ್ತಿಯಾಗಿ ಈ ಕೋಲಾಟದ ಪದಗಳನ್ನೇ ಆಶ್ರಯಿಸಿದ್ದಾರೆ. ತಮ್ಮ ಪ್ರತಿಭಾಶಕ್ತಿಯನ್ನೆಲ್ಲ ಇಲ್ಲಿ ಮೆರೆದಿದ್ದಾರೆ. ಕೋಲಾಟದ ಸಂದರ್ಭ ಇಲ್ಲದಾಗಲೂ ಬೇಸರ ಕಳೆಯಲು ಈ ಹಾಡುಗಳನ್ನು ಹೊಲಗದ್ದೆಗಳಲ್ಲಿ ಹಾಡುವುದುಂಟು. ಇಲ್ಲಿ ದೈವಸ್ತುತಿ, ಪ್ರಣಯ, ಹಾಸ್ಯ, ವಿಡಂಬನೆ ಮುಂತಾದವು ಮೂಡಿನಿಂತಿವೆ. ಪ್ರಣಯದ ವೈವಿಧ್ಯತೆಗೆ ಸಂಬಂಧಿಸಿದ ಹಾಡುಗಳೇ ಹೆಚ್ಚಿನ ಸಂಖ್ಯೆಯಲ್ಲಿವೆ. ಹೆಣ್ಣುಭಾವ ಆರೋಪಿಸಿಕೊಂಡು ಹೇಳಿದ ಹಾಡುಗಳು ಸ್ವಾರಸ್ಯಪೂರ್ಣವಾಗಿವೆ.

ಈ ಹಾಡುಗಳನ್ನು ಸಂಗ್ರಹಿಸುವಲ್ಲಿ, ಸಹನೆಯಿಂದ ಹಾಡು ಹೇಳಿದ ಕಲಾವಿದರಿಗೆ, ಇತರ ನೆರವು ನೀಡಿದ ಲೋಕಪ್ಪ, ನಾಗಯ್ಯ, ಮಾರುತಿ, ಗಿರಿಯಪ್ಪ ಮುಂತಾದ ವಿದ್ಯಾರ್ಥಿ ಮಿತ್ರರಿಗೆ ನಾನು ಋಣಿಯಾಗಿರುವೆ.

ಹೊಸಪೇಟೆ
25-12-80

ಡಾ. [illegible] ಮಾಲಶೆಟ್ಟಿ

# ಪರಿವಿಡಿ

## ೧ ದೈವ



## ೨ ಪ್ರಣಯ

## ೩. ತಮಾಷೆ

## ೪ ಸಂಕೀರ್ಣ

## ೧ ಅಪ್ಪ ಹಂಪಯನ ಹೊಸ ತೇರು

ಕೋಲು ಕೋಲೆನ್ನ ಕೋಲೆ
ಸಿರಿಗಂದವಿ ಕೋಲು ಕೋಲೆನ್ನ ಕೋಲೆ ||

ಆರೂರು ಇದ್ದಲ್ಲಿ ಕೀಲ್ಯಾಕೊ ಜಡದಾರೊ
ಹೊಂದಿ ಹೊಂದಿಸಿ ಕೀಲ ಜಡಿದಾರೊ
ಹೊಂದಿ ಹೊಂದಿಸಿ ಕೀಲ ಜಡಿದರ
ಅಪ್ಪ ಹಂಪಯನ ಹೋಸ ತೇರೊ || ಕೋಲು || || ೧ ||

ಅಪ್ಪ ಹಂಪಯನ ಹೊಸ ತೇರೆಳೆತೇತೆಂದು
ಸುತ್ತ್ಯಾಲ ಪರಸ ಬರತ್ವತಿ |
ಸುತ್ತ್ಯಾಲ ಪರಸಿ ಬರತ್ವತಿ ಆನಿಗೊಂದಿ
ಗುಡಿಯಲ್ಲಿ ಕಾರಂಜಿ ತಿರುವ್ಯಾರೊ | ಕೋಲು.... || ೨ ||

ಆನೆಗೊಂದಿಯ ಸುದ್ದಿ ಏನ ಹೇಳಲೆಣ್ಣ
ಹೊಡೇದ ವ್ಯಾಲ ಹೂಬಾಣ |
ಹೊಡೇದ ವ್ಯಾಲ ಹೂ ಬಾಣ ಪಂಪರಾಯ್ನ
ಡೇರೇದ ವ್ಯಾಲ ಕಳಸ್ವವು | ಕೋಲು....
ಡೇರೇದ ವ್ಯಾಲ ಕಳಸುವು ಹಂಪನ್ನು
ಗೋಪುರದ ವ್ಯಾಲ ಕಳಸ್ವವು | ಕೋಲು.... || ೩ ||

ಹಂದರ ಹಾಕಿ ಗಂದ ಸೆಳೆವು ಕೊಟ್ಟ
ಜತ್ತಿಲೆರಡ ತೇರ ನಿಲಿಸ್ಯಾರ |
ಜತ್ತಿಲೆರಡ ತೇರ ನಿಲಿಸ್ಯಾರ ಆನೆಗೊಂದಿ
ಚತ್ತೀರ ಕುಲದವರು ಎಳಿಸ್ಯಾರ | ಕೋಲು.... || ೪ ||

## ೨ ತೇರು ಸಾಗತಿತಿ

ನಾಕಗಾಲಿಯ ತೇರು ನಿಲಿಸಿದಾರ
ಏಳಂತಸ್ತಿನದು.

ತೇರಿನ ಮ್ಯಾಲಿ ಪಟಾನ್ನ ಚ್ಚಿದಾರ
ಹಸರು ಹಳದಿ ಕೆಂಪಾ ॥ ೧ ॥

ತೇರಿನ ಮ್ಯಾಲ ಕಳಸ ನೋಡಿದರ
ಬಂಗಾರ ತಳ ತಳ
ಬಾಜಾ ಬಜಾರ ಗುಂಟ ತೇರ ಸಾಗತತಿ
ಏನೇನು ಮಜಕೂರಾ ॥ ೨ ॥

ಗುಟ ಗುಟ ಮ್ಯಾಳಾ ಗುಮ್ಮಟ ಮ್ಯಾಳಾ
ಬೋರಂಬೊ ಬಾಜಂತ್ರಿ ಮ್ಯಾಳಾ
ತಾಳಮ್ಯಾಳಾ ತಮ್ಮಟಿ ದಿಮ್ಮಡಿ
ದೇವರು ಹಂಪಯ್ ಇದ್ದಲ್ಲಿ ॥ ೩ ॥

ಶಂಕು ಜಾಗಟೆ ಸವನಾಗ್ ಹಿಡಿದರೆ
ನಿಲಕಿಲ್ಲದ ದಾಸರ
ಬೆಂಡು ಬತ್ತಾಸು ಕೊಂಡು ತಿಂಬುತಾರೆ
ಕೂಡ್ಲಿಗಿ ಸೂಳೇರಾ ॥ ೪ ॥

ಹೊಳಿಯ ದಂಡಿಲಿ ಮೂರತನಾಗ್ಯಾನ
ನಿಂಗಣ್ಣ ದೇವರಾ. ॥ ೫ ॥

## ೩. ತೇರಿನ ಸಿಂಗಾರಗಳಣ್ಣಾ

ತೇರಿನ ಸಿಂಗಾರಗಳಣ್ಣಾ
ಕೇಳಂದ್ಹೇಳುವಿರಾ
ಜಾತ್ರಿ ವಿಸ್ತಾರಗಳಣ್ಣಾ
ನೋಡಂದ್ಹೇಳುವಿರಾ ॥ ೧ ॥

ಉತ್ತರ ದಿಕ್ಕು ಕಂಕಣ ದೇಸಾ
ಹುಟ್ಟಿತಣ್ಣಾ ಮಾಲಿಂಗನ ತೇರು
ಆರುಗಾಲಿಯ ಕೀಲು ಮಂಟಪಾ
ಚ್ಛಾಳಿಗಳ ಜಡಿದು ಬಳಿಗಳ ತಿದ್ದಿ

ಸಂಪಿಗೆಣ್ಣಿ ಎರದಿದ್ದಾರಣ್ಣಾ
ಟೆಂಗಿನೆಣ್ಣಿ ಪೂಸಿದ್ದಾರಣ್ಣಾ
ಮುಂದಲ ಗಿರಿಯ ಪರ್ವತವಣ್ಣಾ
ಮಾಲಿಂಗ ಇದ್ದಲ್ಲಿ ॥ ೨ ॥

ಅಚ್ಚಾಯ ಉಚ್ಚಾಯನ ತೇರು
ಜತ್ತೀಲಿ ಎಳಿವದು ಹೂವಿನ ತೇರು
ಸುತ್ತಮುತ್ತಲ ಮುತ್ತಿನಂಗಡಿ
ಬತ್ತದಂಗಡಿ ಬಾಣದಂಗಡಿ
ಓದು ಬುಕ್ಕಿಟ್ಟನಂಗಡಿ
ರಸ್ತಿ ಅಂಗಡಿ ಕವತಳವಣ್ಣಾ
ಸೆಟ್ಟಂದೊ ಮೆಣಸಿನ ಅಂಗಡಿ
ಕೇಳುಂದ್ಹೇಳುವಿರಾ ॥ ೩ ॥

ಆ ಕಲ್ಲು ಈ ಕಲ್ಲು ಹಾದಿಗಲ್ಲು
ಸೇರುಗಲ್ಲು ಪಂಚೇರುಗಲ್ಲು
ಮ್ಯಾಕೆ ಒಗೆದರೆ ಕವಣೆಗಲ್ಲು
ಕೆಳಕ ಬಿದ್ದರ ಪಾಂಡವರ ಕಲ್ಲು
ಎದಿಮೇಲಿರುವದು ಲಿಂಗದ ಕಲ್ಲು
ನಾರೇರು ತಿರುವದು ಅತ್ತಿಯ ಕಲ್ಲು
ಮಿಂಡರು ತಿರುವದು ಗೋದೀ ಕಲ್ಲು
ಬಾವಿಗ್ಹಾಕೋದು ಬಾಲುಗಲ್ಲು
ಹಗೇವುಕ ಹಾಕೋದು ಹಲ್ಲುಗಲ್ಲು
ಮ್ಯಾರಿಗ್ಹಾಕೋದು ಪಾಮುಸಗಲ್ಲು
ಚಾವಡಿಗ್ಹಾಕೋದು ಚದುರಂಗಲ್ಲು
ಅಗಸಿಗ್ಹಾಕೋದು ನಮೋಜಿ ಕಲ್ಲು
ಗುಡಿಗುಂಡಾರ ಕಟ್ಟೋದು ಕಲ್ಲು
ಕಲ್ಲಿನೊಳಗ ಕಲ್ ಮೇಲಾದೀತ
ಮಾಲಿಂಗ ಇದ್ದಲ್ಲಿ ॥ ೪ ॥

ಓಕಳಿಕೊಂಡ ಉಗ್ರಾಣದ ಮನೆಯು
ಬಾಳೆ ಕೂಡಿ ಬಸವಣ್ಣನ ದಡ್ಡಿ
ಕೋಲಾಟ ಮೇಲಾಟಗಳಣ್ಣಾ

ಚೆಂಡಿನಾಟ ಚಿನಬಗರಿಗಳಾಟ
ಡೊಂಬರಾಟ ಚಿನ ವೀರರಯ್ಯಾ
ಸೋಗುಗಳಣ್ಣಾ ಬೋಗುಗಳಣ್ಣಾ
ದಿನಾಲೂ ದಿನಸಿನ ಮೇಳಗಳಣ್ಣಾ
ದೇವರ ಹಂಪಮ್ಮ ಇದ್ದಲ್ಲಿ ||೫||

ಹಿಂದೋಲೆ ಬುತ್ತಿ ಮುಂದೋಲೆ ಬುತ್ತಿ
ಹಿಂದೋಲೆ ಸ್ಯಾಲೆ ಮುಂದೋಲೆ ಸ್ಯಾಲೆ
ನಾಕಮಲ್ಲಿಗಿ ಬೇಕಾದುಂತಾ
ಲೋಕದ ಶಿವನು ಇಲ್ಲಿದ್ದಾನಲ್ಲಾ
ಪಾರ್ವತಿ ಪರಮೇಶ್ವರನ
ನೋಡಂದ್ಹೇಳುವಿರಾ

## ೪ ತೇರಿಗ್ಹೋಗೋಣು ಬನ್ನಿರೆ

ತೇರಿಗ್ಹೋಗೋಣು ಬನ್ನಿರೆ
ಗೆಣೆಯರು ಕೂಡಿ ಕೋಲು ಒಯ್ಯೋಣು ಬನ್ನಿರೆ ||

ತೆಗ್ಗಿನ್ಯಾಗ ಹುಟ್ಟೋ ತೇರು
ತೆಗ್ಗಿನ್ಯಾಗ ಬೆಳಿಯೋ ತೇರು
ತೆಗ್ಗಿನ್ಯಾಗ ಎಳಿಯೋ ಪಂಪರಾಜನ ತೇರು ||೧||

ಗುಡ್ಡದಾಗ ಹುಟ್ಟೋ ತೇರು
ಗುಲಗಂಜಿ ಮಾಟದ ತೇರು
ಗುಡ್ಡದಾಗ ಎಳಿಯೋ ಜಂಬುನಾಥನ ತೇರು ||೨||

ಕುಂಟ್ಯಾಗ ಹುಟ್ಟೋ ತೇರು
ಕುಂಟ್ಯಾಗ ಎಳಿಯೊ ತೇರು
ಹೊಸಪೇಟ್ಯಾಗ ಎಳಿಯೋ ಒಡಕರಾಯನ ತೇರು ||೩||

### ೫ ಕೊಮಾರ ಸ್ವಾಮಿ

ಸುವ್ವಿ ಸುವ್ವಲಾಲಿ | ಚನಿಗಾ
ಸುವ್ವಕ್ಕ ಸುವ್ವಲಾಲಿ ||

ಸೊಂಡೂರ ಗಂಡ್ಯಾಗೆ
ಸಾಲ ಟೆಂಗಿನ ಮರ
ಕೊಂಬಿ ಕೊಂಬೆಲ್ ಎಳಿಗಾಯ್ | ಅಕ್ಕಯ್ಯ | ಸುವ್ವಿ.....
ಕೊಂಬಿ ನೀ ಕೊಂಬೆಲ್ ಎಳಿಗಾಯ್ | ಕೊಮಾರ ಸ್ವಾಮಿ
ಗಂದಕ್ಕ ತಕ್ಕ ತಿಳಿನೀರ್ | ಅಕ್ಕಯ್ಯ| ಸುವ್ವಿ
ಗಂದಕ್ಕ ತಕ್ಕ ತಿಳಿನೀರ್ | ಕೊಮಾರಸ್ವಾಮಿ
ಹೆಣ್ಣು ಮಕ್ಕಳಿಗೆ ನಿರುವಾಣ್ಯಕ್ಕಯ್ಯಾ |

### ೬ ಇಳದಬಾರ ಗಾಳಿಮ್ಮ

ಹೂವ ಬಾ ಗಣದಿರಗಿ
ಮುದ್ದು ಕೋಲು ಕೊಲೆನ್ನ ಕೋಲ.

ಹೂವ ಬಂದು ಎದರಿಗೆ ನಿಂತಾವ
ಇಳದ ಬಾರ ಗಾಳೆಮ್ಮ
ಆರಾಳು ನಾವು ಬಂದೇವಮ್ಮ
ಕೋಲು ಮ್ಯಾಳ ತಂದೇವ ||೧||

ಕಪ್ಪು ತಂದು ಎದರಿಗೆ ನಿಂತು
ಇಳದ ಬಾರ ದುರಗಮ್ಮ
ಹತ್ತಾಳು ನಾವು ಬಂದೇವಮ್ಮ
ಒತ್ತೀಲಿ ಕೋಲು ಬಡಿದೇವ ||೨||

### ೭ ಸ್ವಾಮಿ ಮಳೆರಾಯ

ಸ್ವಾಮಿ ಮಳೆರಾಯ ಏ ತಂದೆ
ಯಾವ ದೇವರಿಲ್ಲೊ ನಿನ ಮುಂದೆ

ನೇಮ ನಿತ್ಯಾ ಕಾರೀ ಕಲ್ಯಾಣಾ
ನೀನು ಭೂಮಿಮ್ಯಾಲ ಬಂದಿಂದೆ ||೧||

ನೀನ ಬಾರದೆ ಮುನದಿಂದೆ
ಕೇಡು ತೋರುವದು ಒಂದೊಂದೆ
ಕಷ್ಟಪಟ್ಟ ಜನ ನಷ್ಟವಾಗುತದೆ
ಯಾತಕ ಇಂತಾ ಹೊತ್ತು ತಂದೆ ||೨||

ಫಲ ಬೆಳಿಯದೆ ಹೋದಿಂದೆ
ಹ್ಯಾಗೆ ಬದಕಬೇಕು ಮಣತಿಂದೆ
ಮಾನವ ಜಾತಿಗೆ ಮಾಡಿದ್ದಾದರೆ
ಬದಕಲಿಕ್ಕೆ ಅನ್ನವ ತಿಂದೆ. ||೩||

ಬಂಡಿ ತಿರಗಿ ಬಾಳ ಬಂಡಾಟ
ಬಡಜನರಿಗೆ ಬಂದೀತ ಗೋಳಾಟ
ಮಾರಿಹಾವಳಿ ಬಂದಂತಾತ
ಜ್ವಾಳದ ಸುತ್ತಲ ಮಾರಾಟ. ||೪||

ಬ್ರಹ್ಮನ ವರ ಇದು ಬರದೀತು
ಆಗ ಕಾರೀವು ತಪ್ಪೀತು
ದೇವ ದೇವರ ನಾಲಿಗಿಬಿತ್ತು
ದೋಸೇರ ಪಂಚಾಂಗ ಸುಟ್ಟ್ಯೋತು ||೫||

ಕಾಲಜ್ಞಾನ ಕಡಿಮಾಯಿತು
ರೊಟ್ಟಿಮಂಚ ಮೂಲಿಗೆ ಬಿತ್ತು
ನೀರು ಮಳೆ ಕಡಿಮ್ಯಾಗಿ ಕಲಿಯುಗದ
ಕಲ್ಲಿನ ಪೆಟ್ಟ್ಯೊಂನ್ದೆ ಚ್ಚಾತು ||೬||

## ೮ ಲವಣಿಕೇರ್ ಹನುಮಾ

ತಂಡವೊ ಕೈಪವೊ
ತಂಡವೊ ಕೈಪವೊ
ತನ ಜುಟ್ಟು ಜನಿವಾರ

ದಂಡಿ ದಂಡಿಗಿ ಸುದ್ದಿ
ನಿನಕೈಲೆ ಓಸ್ವಾಮಿ
ಲಂಡನಿವನ್ಯಾರೆಂದು
ಬಂಡನಿವನ್ಯಾರೆಂದು
ರ್‍ಯಾವಳಾ ಕೇಳಿದರ
ಹಿಂಡ ದೈತ್ಯರ ಗಂಡ
ನಿಮ್ಮಕ್ಕ ತಾಟಗಿತ್ತಿ ಮಿಂಡ
ಭಪ್ಪರೆ ಹನುಮಾ
ಬಲ್ಲಿದ್ದರು ಹೌದು ಕಾಣೆ
ಲವಣಿಕೇರ್ ಹನುಮಾ
ಬಿಟ್ಟನಂದು ಹೌದು ಕಾಣೆ.

ಮಾತಿ ಮಾತಿಗಿ ನೀನು
ಏಚಿ ಎನ್ನಲು ಬೇಡ
ಹಾರಿದ್ದನೋ ತಮ್ಮ
ಹನ್ನೊಂದ ಗಾವದ
ವಾಸರಕ ನಿಂತಿದ್ದೆ
ವೋಟೇಯ ಕೊಟ್ಟದೆ
ಪಡಿಯಲಂಕೀಯನ್ನು
ಕೋನುಳ್ಳ ಸೋಮುದ್ರ
ದಾಟ ಹೋಗದಿದ್ದಾನೊ ಹನುಮಾ
ಬಲ್ಲಿದ್ದರು ಹೌದು ಕಾಣೆ
ಲವಣಿಕೇರ್ ಹನುಮಾ
ಬಿಟ್ಟನಂದು ಹೌದು ಕಾಣೆ.

ಇಂತ ರೋಸ ಇದ್ದವನು
ಯಾವಲಿದ್ಯೋ ಕಪಿಯು ನೀನು
ಇದ್ದು ಉಂಟಾದರೆ
ಒದ್ದ ಕೊಲ್ಲದಿದ್ದ ನೀನು
ಸತ್ಯುಳ್ಳ ರಾಮರ ಪಾದದಲ್ಲಿತ್ತು
ಬಲ್ಲಿದ್ದರು ಹೌದು ಕಾಣೆ
ಲವಣಿಕೇರ್ ಹನುಮಾ
ಬಿಟ್ಟನಂದು ಹೌದು ಕಾಣೆ.

## ೯ ಎಷ್ಟು ಹೇಳಲಿ ನಿನ ಪಂತಾ

ಎಷ್ಟು ಹೇಳಲಿ ನಿನ್ನ ಪಂತಾ
ಲಂಕಾ ಸುಟ್ಟು ಸುರುವಯ್ದಿಲ್ಲಾ
ಬಾಲದ್ದ ನುಮಂತಾ
ಎಷ್ಟು ಹೇಳಲಿ ನಿನ ಪಂತಾ

ಬಾಲ ನಿನ ಕಪಿ ದಂಡು
ಬಾಲ ನಿನ ಕಪಿ ದಂಡು
ಹೇಳಲೊಂದಳವಿಲ್ಲ
ಲೆಕ್ಕವಿಲ್ಲದ ಕುದರಿ
ಆನಿ ಅಂಬಾರಿ
ತೇರಿ ನಾಗಾರಿ
ಮುಂದ ನುಡಸೋದುಕಾಳಿ
ವೈರಿ ಬಂದಲ್ಲಿ
ಡಂಗುರವ ಸಾರಿ
ಬಂದು ಕೊಳ್ಳೃಚ್ಚಿದರ
ಮನಿಮನಿಗಿ ಸೇರಿ
ಗುರುಮನಿಯು ಬಿಟನೊಂದ
ಅರಮನಿಯ ದಾರಿ
ಇಂಥಾ ಪಂಜ್ರ ಕಟ್ಟಿಸುಡುವ
ರಾವುಳ ಮಾರಿ
ಸುಟ್ಟೇಳು ಸಮುದರ
ದಾಟಿ ಬಂದ್ದೆ ನುಮಾ | ಎಷ್ಟು ಹೇಳಲಿ ನಿನ ಪಂತಾ.

ಅಡವಿ ಅರ್ಣ್ಯಾಣದೊಳಗೆ
ಅಡವಿ ಅರ್ಣ್ಯಾಣದೊಳಗೆ
ನೀಲಾದ ಗಿಡ ಹುಟ್ಟಿ
ಹಣ್ಣು ತಿನಗೊಡವೊಲ್ಲೆ
ಕಾಯಿ ತಿನಗೊಡವೊಲ್ಲೆ
ನಿಂದೆಷ್ಟು ಗರ್ವೋ
ಗರ್ವಿಷ್ಠನೋಳ್ ಸುರುವೋ

ರಾವುಳ ಕೊಲ್ಲಿದ್ದೆ
ಕಡ್ಡಿ ತಾತಾ ಅಂದ್ರ
ಗುಸ್ಡ ತುಂದ್ಯೊ ಹನುಮಾ | ಎಷ್ಟು ಹೇಳಲಿ ನಿನ ಪಂತಾ

ರಾವರಿಗೆ ತಕ್ಕಂತಾ
ರಾಮರಿಗೆ ತಕ್ಕಂತಾ
ಬಂಟನೀ ಬೂಪಾ
ಹಿಂದೆ ಆಡಿದ ಮಾತು
ಜಟ್ಟೆರಿಗೆ ತೂಕಾ
ಮುಂದಲಾಡಿದ ಮಾತು
ಜಟ್ಟೆರಿಗೆ ತೂಕಾ
ಸಿತಿದೇವಿ ಕೊಟ್ಟ್ಯಾಳ
ರಾವುಳಾಗ ಸಾಪಾ
ಹಣುಮಪ್ಪ ಮಾಡಿದ್ದು
ಲಂಕ್ಯೊಳಗ ಮಾಪಾ
ಬೇಡಿ ಕೊಂಡರ ಕೊಡುವೆ
ಲಂಕೀಗಿ ದೀಪಾ | ಎಷ್ಟು ಹೇಳಲಿ ನಿನ ಪಂತಾ.. .

ರಂಗಳಿಸಿ ಕಿತ್ತ್ಯಾನ
ರಂಗಳಿಸಿ ಕಿತ್ತ್ಯಾನ
ತಲೆಗೇರಿ ಬೆಟ್ಟವ
ಆಕಾಶ ನಡುಗೀತು
ಭೂಮಿ ತಲ್ಲಣಿಸೀತು
ಲಕ್ಷ್ಮಣ ಕೊಟ ನೊಂದ್
ಆಕ್ಷಾರ ಬಟ್ಟಾ
ರಾಮಯ್ಯ ಮೆಚ್ಚಿ
ರಾಜ್ಯವೇ ಕೊಟ್ಟಾ
ಕೋಳಿ ಕೂಗಿದಲ್ಲಿ
ಹನುಮ ನಿನ ಪಟ್ಟಾ | ಎಷ್ಟಂತ ಹೇಳಲಿ ನಿನ ಪಂತಾ...........

## ೧೦ ಕಾಯೊ ನನ್ನರಸಿ

ಹುಬ್ಬಳ್ಳಿ ಕಬ್ಬಳ್ಳಿ
ಹುಬ್ಬಳ್ಳಿ ಕಬ್ಬಳ್ಳಿ
ಹಬ್ಬೀತ ರಸಬಳ್ಳಿ
ತೆಗ್ಗಿನಾಗಿರುವದು
ಕನಕಗಿರಿಯೋ | ಸ್ವಾಮಿ
ಕನಕಗಿರಿಯೋ ||೧||

ಕನಕಗಿರಿ ಜಾತ್ರೀಗಿ
ಕನಕಗಿರಿ ಜಾತ್ರೀಗಿ
ವಡ್ಡುವಾಲಗದಿಂದ
ದೊಡ್ಡವರ ಮಗಳೆಂದು
ಕಾಯೋನನ್ನರಸಿ
ಒಬ್ಬಳೊಂದಿರಲಾರೆನೋ ||೨||

ಕಾರೆಂಬ ಕತ್ತ್ಯಲ
ಕಾರೆಂಬ ಕತ್ತ್ಯಲ
ಬೋರೆಂಬ ಜಡಿಮಳಿಯೊ
ಕಾಮ ಬೀಮನೆಂಬೊ
ಕರಿಯ ತೇಜೋ | ಸ್ವಾಮಿ
ಬಿಳಿಯ ತೇಜೋ ||೩||

ಕಾಮ ಬೀಮನೆಂಬೊ
ಕಾಮ ಬೀಮನೆಂಬೊ
ಕರಿಯ ತೇಜಿಯ ಮೇಲಿ
ಪಾರ ಪಾರವನಿಟ್ಟು
ಕಾಯೊ ನನ್ನರಸಿ
ಒಬ್ಬಳೊಂದಿರಲಾರೆನೊ ||೪||

## ೧೧ ಗುಡಿಯ ನೋಡಿರಣ್ಣ

ಗುಡಿಯ ನೋಡಿರಣ್ಣ
ದೇವರ ಗುಡಿಯ ನೋಡಿರಣ್ಣ
ಗುಡಿಯ ನೋಡಿರೋ ಪಡವಿಗೆ ಒಡಿಯೊ
ಒಡಿಯ ಅಂಜನೇಯ್ಯನ ||೧||

ಗುಡ್ಡದ ಮ್ಯಾಗಳ ಗುಡಿಯೊ
ನಾಡಿಗೆ ಒಡಿಯೊ
ತಿಳಗ ಚೌಡವ್ವನಣ್ಣಾ
ಬೇಡಿದ ವರವ ಕೊಡುವಳಣ್ಣಾ ||೨||

ನಡಿವವಗೆ ಬಕ್ತಿ
ನಡಿದವಗ ಅಪಕೀರ್ತಿ
ಕಡಿಗಿ ಕೊಡುವಳಣ್ಣಾ
ಆಕಿ ಬಿಡತಾಳ ಕಾಡಿಗ್ಗಣ್ಣಾ || ೩

ಕರಡಿದುರ್ಗದ ಗಾರಾ
ಹನುಮಂತ ದೇವರಾ
ಕೊರಳಿಗ್ಹು ವಿನ ಹಾರಾ
ಆತಗೆ ಮಾಡ್ವೆವು ನಮಸ್ಕಾರಾ ||೪||

## ೧೨ ಕೈಯ ಮುಗಿವೇನ

ಕೋಲು ಕೋಲೀನ
ಮುತ್ತೀನ ಕೋಲು ಮೇಲೀನ
ಏನು ಹೇಳಲಿ ಅಣ್ಣಾ
ಹುಡುಗರು ಒಯ್ಯೋ ಮಾಲೀನ ||೧||

ಶ್ಯಾರ ಕೊಟ್ಟೋರಾ | ಅಲ್ಲಿ
ಧೀರ ಕೊಟ್ರಯ್ಯ
ನಮ್ಮ ಮ್ಯಾಲ ಕರಣ ಇರಲಿ
ಕೈಯ ಮುಗಿವೇನ ||೨||

ಶ್ಯಾರ ಉಜ್ಜನಿ | ಅಲ್ಲಿ
ರುದ್ರ ಸಿದ್ದಣ್ಣ
ನಮ್ಮ ವ್ಯಾಲೆ ದಯವಿರಲಿ
ಕೈಯ್ಯ ಮುಗಿವೇನ || ೩ ||

ಶ್ಯಾರ ಹಿರಿಕೇರಿ | ಅಲ್ಲಿ
ಕೇರಿದುರಗವ್ವ
ನಮ್ಮ ವ್ಯಾಲೆ ದಯವಿರಲಿ
ಕೈಯ್ಯ ಮುಗಿವೇನ || ೪ ||

## ೧೩ ನಮುದು ಶಿವಶರಣೊ

ತಂದಂದು ನಾನೂ ತಂದೂನಾನಾ
ತಾನಂದೂ ನಾನೂ ತಂದೂನಾನಾ

ವಜ್ಜೂರ್ ಮತ್ತೀಹಳ್ಳಿ ಸದರೀ ಕರವಿನಕಲ್ಲು
ಮದ್ಯಾನ್ನ ದಾರ್‍ಯೋ ಉಜ್ಜೂನಿ | ತಂದಂದು ..
ಮದ್ಯಾನ್ನ ಏದಾರಿ ಉಜ್ಜೂನಿ ಒಳಗಿರುವ
ಸಿದ್ದಲಿಂಗನ್ನಗೆ ಶಿವಶರಣೋ | ತಂದಂದು

ಸಿರಬಿ ಸುಂಕದ ಕಲ್ಲು ಮರಬ ಅಮ್ಮನ ಕೇರಿ
ಜರಗಿನಾಗೈತ್ಯೋ ಜರಮಾಲಿ | ತಂದಂದು........
ಜರಗಿನಾಗೈತಿ ಜರುಮಾಲಿ ದುರಗವ್ಗೆ
ಇಲ್ಲಿಂದ ನಮುದು ಶಿವಶರಣೋ | ತಂದಂದು

ಸೊಕ್ಕಿ ಹೆರಲ್ ಕಟ್ಟಿ ಬತ್ತೀಲಿ ಮಾಕುಂಟಿ
ಮುತ್ತೀನ ತ್ವಾಟಿ ತಾರಳ್ಳಿ | ತಂದಂದು
ಮುತ್ತೀನ ತ್ವಾಟಿ ತಾರಳ್ಳಿ ಒಳಗಿರುವೊ
ದಾರಾ ರಂಗನಗೆ ಶಿವಶರಣೋ | ತಂದಂದು

ಅಂದ್ವ ಕರ್‍ಚೀಕೇರಿ ಚೆಂದಕ್ಕ ಮಾದೀಹಳ್ಳಿ
ಹೊಂಬಾಳಿ ಬೆಳವೊ ದನಿಜ್ವಾಲಾ | ತಂದಂದು.......

ಹೊಂಬಾಳಿ ಬೆಳವೊ ದನಿಜ್ವಾಳದೊಳಗಿರುವ
ಕೊನ್ನತ್ತೆವ್ವಾಗೆ ಶಿವಶರಣೊ | ತಂದಂದು

ಮಾಗಡಿ ಮಡ್ರಹಳ್ಳಿ ನಡುವಿ ಜಾಡನ ಕಟ್ಟೆ
ಕಡೆಗುಡ್ಡದಾಗೆ ಇರುವಾಕಿ | ತಂದಂದು.. ... .
ಕಡೆಗುಡ್ಡದಾಗೆ ಇರುವಾ ಚೌಡವ್ವಾಗೆ
ಇಲ್ಲಿಂದ ನಮುದು ಶಿವಶರಣೋ | ತಂದಂದು

## ೧೪ ಜಲದುರಗಿ

ಮಾಯು ಬಂದಾಳ ಕಂಡೀರಣ್ಣಾ
ಮಾಯು ಬಂದಾಳ ಕಂಡೀರಣ್ಣಾ
ಮರ್ತ್ಯಕ್ಕ ಜಲದುರಗಿ
ಬಂದಳೇಳಿರಣ್ಣಾ |

ಬರಣಿ ಕಾರ್ತಿಕದಾಗ
ಹುಟ್ಟೇತಿ ಮಳಿ ಮಾರು
ಗುಡುಗು ಮಿಂಚಿಲ್ಲದ
ಅಂತಂತ ಶರಣರಿಗೆ
ಶರಣ ಸಿದ್ದಂಕರಣ
ರಾಮು ರಾಮರ ಮುಂದ
ಕಲಡೋಣಿ ಮಳಿಸುರದು
ಕುಡಿಹಟ್ಟಿ ಮರಿಹಟ್ಟಿ
ಮತ್ತೆ ಆರ್ಯಾಣದ್ಹಟ್ಟಿ
ಇಂತಾ ಇರವಿ ಎಂಬತ್ ಕೋಟಿ
ಜೀವ ರಾಶಿಗಳೆಲ್ಲಾ
ಹಾಳ ನಾಶವ ಮಾಡಿ
ಎತ್ತಲ್ಹೋದಳು ಮಾಯಿ
ಕಾಣದ್ಹಾಂಗೋಡಿ | ಮಾಯ ಬಂದಳು ಕಾಣಿರಣ್ಣ ........

ಸಬ್ಬೆಂಬೊ ರಾತ್ರೀಲಿ
ಅಬ್ಬರಿಸಿ ಎದ್ದಾಳೊ

ಅಂಜಿತಾಂಜನ ಮಡುಗು
ತಾನು ಬಿಟ್ಟೋಂಟಾಳೊ
ಅಕ್ಕ ಹಂಪಮ್ಮನ
ದರಿಸ್ಯಾನ ತಗೊಂಡು
ಒಣಕಿ ಕಿಂಡ್ಯಾಗಲಿಂದ
ತೂರ್ಯಾಳ ಆ ಮಾಯಿ
ರಾಮಲಕ್ಷ್ಮಣ್ಣರ
ದರಸನ ತಗೊಂಡು
ನೆಟ್ಟಗ್ಗರದಾಳ ಗಂಗಿ
ಎತ್ ನಟ್ಟಿಮರದಾಗ | ಮಾಯ ಬಂದಳು ಕಾಣಿರಣ್ಣಾ ...

ಕ್ಯಾಟಿಗನಾಳ ಮುಂದ
ತ್ಯಾಟಗಳು ಕೆಡಿಸ್ಯಾಳ
ಗುಳೆದ್ ಲೆಕ್ಕಮ್ಮನ
ಗುಡಿಗೋಪುರ ಕೆಡಿಸ್ಯಾಳ
ಹಗಲಿ ಮದ್ದಿನದಾಗ
ದೋರೋಜಿ ಕೆರಿ ಒಡದು
ಗಿಡಗಿಡಕ ಒಂದ್ದೇಣಾ
ಮರಮರಕ ಒಂದ್ದೇಣಾ
ಬಸರು ಹೆಣ ಮಾಗಳ
ತಲೆಗಳ್ಹೋದಾವೆಂದು
ನಟ್ಟಗ್ಗರದಾಳಗಂಗಿ
ಎತ್–ನಟ್ಟಿ ಮರದಾಗ | ಮಾಯ ಬಂದಾಳೇಳಿರಣ್ಣಾ ...

## ೧ ನಾಳೆಬರತೀನೆಂದು

ಕೆಂಪೆ ನಿನ್ನೊಳು ಸೊಗಸೇನೆ
ಬಾಳ್ ಇಂಪಾಗಿ ದನಿದೋರುವೇನೆ ||

ನಾಳೆ ಬರತೀನೆಂದು ನಿನಕೈಲಿ ಮುಟ್ಟಿ
ಹೋದೆಲ್ಲ ಹೆಣ್ಣೆ ಮನಿಮಾರ ಬಿಟ್ಟು
ಬರತೀನಿ ಬಾಸಕ್ಕೆ ಎಸರಿಟ್ಟು
ಮನಿಯಾಗ ಅಳುವ ಕಂದಮ್ಮನ ಬಿಟ್ಟು
ನಾಳೆ ಬರತೀನೆಂದು ನಿನಕೈಲಿ ಮುಟ್ಟಿ
ಹೋದೆಲ್ಲ ಹೆಣ್ಣೆ ಮನಿಮಾರ ಬಿಟ್ಟು || ೧ ||

ಬಗರಿಮಾಟದ ಎದಿಕಟ್ಟ
ಹಣಿಮ್ಯಾಲಿಟ್ಟಾಳ್ರಿ ಗಂದದ ಒಟ್ಟ
ನಿನಗಾಗಿ ಹಾರಿದ್ದೆ ಎದಿಮುಟ ಕಳ್ಳಿ
ಕಾಲಿಗೆ ಸುತ್ತಿತ್ತು ಮಾಲಿಂಗನ ಬಳ್ಳಿ
ನಿನಮ್ಯಾಲ ಇಟ್ಟಿದ್ದೆ ಬಾಳ ದಿನ ಕಣ್ಣ
ಹದ ಮೀರಿ ತಿರಗುವ ಹೆಣ್ಣೆ
ನಿನ್ನ ಎದಿಮ್ಯಾಲ ಮೂಡ್ಯಾವ ಗಜನಿಂಬಿ ಹಣ್ಣೆ
ನಾಳೆ ಬರತೀನೆಂದು ನಿನಕೈಲಿ ಮುಟ್ಟಿ
ಹೋದೆಲ್ಲ ಹೆಣ್ಣೆ ಮನಿಮಾರ ಬಿಟ್ಟು || ೨ ||

## ೨ ಮುತ್ತ ಕಳವೊ ಮೂಗತಿಗೆ

ಎಲೆ ಹುಡಗಿ ನಿನ ಗಂಡಾ ಉಡದಬ್ಯಾಟಿಗಾರಾ
ಅಡಿವ್ಯಾಗಳ ಕಲ್ಲ ಪುಡಿ ಪುಡಿ
ಅಡಿವ್ಯಾಗಳ ಕಲ್ಲ ಪುಡಿ ಪುಡಿ ಎಲೆ ಹುಡಗಿ
ಉಡವ ತಂದೇನಿ ಸವಿ ನೋಡ || ೧ ||

ಆಚೆ ದಂಡೀಲಿ ನಾನು ಈಚೆ ದಂಡೀಲಿ ನೀನು
ಬಾಸೆನ್ನ ಕೊಳ್ಳಿ ಬಲಗೈಲಿ
ಬಾಸೆನ್ನ ಕೊಳ್ಳಿ ಬಲಗೈಲಿ ಮಾವನ ಮಗಳ
ಮೀಸಲಿದ್ದೀನಿ ನಿನಗಾಗಿ || ೨ ||

ಸತ್ತರ ಸುದ್ದಿ ಕಳವೊ ನೆತ್ತಾರ ಬಟ್ಟೆ ಕಳವೊ
ಕತ್ತೀಯು ಕಳುವೊ ನಿನಗುರತ
ಕತ್ತೀಯು ಕಳುವೊ ನಿನಗುರತ ಮಾವಯ್ಯ
ಮುತ್ತ ಕಳುವೊ ಮೂಗತಿಗೆ || ೩

## ೩ ಗೆಣೆಯಾ ಸಿಗಲಿಲ್ಲ

ಚೆಜ್ಜಿ ಬಾನದ ಬುತ್ತಿ ಗೆಣೆಯಾಗ
ಗೆಜ್ಜೆಯ ಉಡದಾರ ಗೆಣೆಯಾಗ
ಚೆಜ್ಜಿ ಬಾನದ ಬುತ್ತಿ ಉಡಲಾಗ ಕಟ್ಟಿಕೊಂಡು
ಹೆಜ್ಜಿ ಹೆಜ್ಜಿ ನಾ ತಿರುಗತಿ ಬಂದೆ
ಗೆಣೆಯಾ ಸಿಗಲಿಲ್ಲ.

ಜ್ವಾಳ ಬಾನದ ಬುತ್ತಿ ಗೆಣೆಯಾಗ
ಸ್ಯಾವಂತಿಗ್ಗು ವಿನ್ಹಾರ ಗೆಣೆಯಾಗ
ಸ್ಯಾವಂತಿಗ್ಗು ವಿನ್ಹಾರ ಉಡಲಾಗ ಕಟ್ಟಿಕೊಂಡ
ಓಣಿ ಓಣಿ ತಿರುಗುತ ಬಂದೆ
ಗೆಣೆಯಾ ಸಿಗಲಿಲ್ಲ

ಕಡಲಿ ಕೊಬ್ಬರಿ ಬೆಲ್ಲಾ ಗೆಣೆಯಾಗ
ಉಡಲ ತುಂಬಿಕೊಂಡು ಗೆಣೆಯಾಗ
ಕೊಬರಿ ಕಡಲಿ ಬೆಲ್ಲಾ ಉಡಲಾಗ ಕಟ್ಟಿಕೊಂಡ
ಅಂಗ್ಡಿ ಅಂಗ್ಡಿ ನಾ ತಿರಗುತ ಬಂದೆ
ಗೆಣೆಯಾ ಸಿಗಲಿಲ್ಲ.

## ೪ ಹೋಗ ಎಂಬುದು ದುರುಮೇನೆ

ಚೀಟೀನ ಕುಪ್ಪಸದವಳೆ ಈಟೇಟ ಮಲಿಯವಳೆ
ಬ್ಯಾಟೆ ಹೋಗತೀನಿ ಕೈಬಿಡೆ
ಬ್ಯಾಟೆ ಹೋಗತೀನಿ ಕೈಬಿಡೆ | ಎಲೆ ಹುಡುಗಿ
ನೀನು ನನಗೆ ದಯಮಾಡೆ | ದಯಮಾಡೆ || ೧

ಕಾವಿ ಚಲ್ಲಣದವನೆ ಕೈಯಾಗ್ ಬಿಲ್ಹಿಡದವನೆ
ಲ್ಯಾವಣ್ಹಕ್ಕಿ ಬ್ಯಾಟಿ ತಿರುಗೋನೆ
ಲ್ಯಾವಣ್ಹಕ್ಕಿ ಬ್ಯಾಟಿ ತಿರಗೋ | ಬ್ಯಾಡರ್ಹುಡಗಾ
ಹೋಗ ನಿಮ್ಮವರು ಕರದಾರೊ | ಬೈದಾರೊ || ೨ ||

ನವರ್ಮವರು ಕರಿಲಿಕ್ಕೆ ನಿನ್ನೆ ಮನ್ನೆಯವನಲ್ಲ
ಹನ್ನೆರಡು ಕುಂತು ಉಂಡೆ
ಹನ್ನೆರಡು ಕುಂತುಂಡ | ವೈಯುಂಡ್ಹುಡುಗನ
ಹೋಗ ಎಂಬುದು ದರುಮೇನೆ | ನ್ಯಾಯವೇನೆ || ೩ ||

ವಸ್ತರದ ಸೆರಗೀಲಿ ರಸ್ತ ಬಾಳೀಹಣ್ಣು
ಬಿಚ್ಚೂತ ನಿನ್ನ ನೆನೆವೂತ
ಬಿಚ್ಚೂತ ನಿನ್ನ ನೆನೆವೂತ | ರಾಯಚೂರ
ಚಾಕರಿ ಬಿಟ್ಟ ಬರಲೇನೆ | ಇರಲೇನೆ || ೪ ||

ಅಂಗೀಯ ಸೆರಗೀಲಿ ರಂಗ ನಿಂಬೀ ಹಣ್ಣು
ತಿಂಬೂತ ನಿನ್ನ ನೆನವೂತ
ತಿಂಬೂತ ನಿನ್ನ ನೆನವೂತ | ರಾಯಚೂರ
ಸುಬಾಳ ಬಿಟ್ಟ ಬರಲೇನೆ | ಇರಲೇನೆ || ೫ ||

ಹಂಡಬಂಡದ ಕೌದಿ ಹಾಸ್ಯದರ್ಹಾಸ್ಯಾಳ
ದುಂಡ ಮಾಡ್ಯಾಳ ತಲೆಗುಂಬ | ಮೈಗುಂಬ
ಹಂಡಬಂಡದ ಸೀರಿ ತಂದುಕೊಡುವವನ್ಯಾರೆ
ಹೆಂಡರಿಲ್ಲದ ಪುಂಡಗಾರ | ಮೋಜುಗಾರ || ೬ ||

ಕ್ವಾಟ್ಯಾಗ ನಿನ ಮನಿ ಪ್ಯಾಟ್ಯಾಗ ನನಮನಿ
ಮಾತನಾಡಾರ ಮನಿ ದೂರಾ | ದನಿ ದೂರಾ
ಪ್ಯಾಟಿಗಿ ಹೋಗತೀನಿ ಕ್ವಾಟಿಗಿ ಬರತೀನಿ
ಲಡ್ಡು ಮಿಟಾಯಿ ತರತೀನಿ | ಬರತೀನಿ || ೭ ||

## ೫ ಚಂದ್ರಮನ ಬೆಳಕು ನೀರಾಗೆ

ಹೆಗಲ ಮ್ಯಾಗಲ ಕೊಡ ಹೆಗಲ ಮ್ಯಾಲೆ
ಹಸುಗೂಸು ತನ್ನ ಬಗಲಾಗೆ
ಹೊಕ್ಕ ತುಂಬಲಿಲ್ಲ ಬಾವ್ಯಾಗೆ
ಚಂದ್ರಮನ ಬೆಳಕು ನೀರಾಗೆ ॥ ೧ ॥

ಮಿರಿ ಮಿರಿ ಮಿಂಚುವನವಲ್ಲಾ । ನಲ್ಲಾ
ತಳತಳ ಹೊಳಿತಾವೆ ಗಲ್ಲಾ
ಚೀಟಿ ಚೀಟಿನಂಗಿ ಮೈಮ್ಯಾಗ
ಬಂಗಾರ ಕಡಗ ಕೈಯ್ಯಾಗ
ಉಡದಾರ ತಾಯತ ನಡದಾಗ
ಜಂಪ ಹಾಕ್ಯಾನವ್ವಾ ಕಿವಿಯಾಗ ॥ ೨ ॥

ಯಾವ ತಾಯಿ ಹಡದ್ದಾಳೊ ನಿನ್ನ
ಮೆಕವೀಸಿ ಒಪ್ಪುತಾವೆ ಸಣ್ಣ
ನಡಕಟ್ಟ ಗಗ್ಗರಿ ಕೆಮ್ಮಣ್ಣ
ನಿನ್ನ ಪೇಟ ಹಳದಿಯ ಒಣ್ಣ
ಯಾವ ರಾಜನ ಮಗನಾ ಸುಗುಣಾ
ಬಿಳಿ ಕುದರೀಗೆ ಹಾಕತಾನ ಜೀನಾ ॥ ೩ ॥

ಹುಬ್ಬಳ್ಳಿಗ್ಹತ್ತಿ ಬುತ್ತಿ ಜಾಡಿ
ನಗರೂರ್ಹಳ್ಳಕ ವಾಟಾ ಮಾಡಿ
ಹೋಗಿಬಿಟ್ಟನಲ್ಲಾ ಮಣ್ಣ ಕೂಡಾ
ಎಲ್ಲಿ ಹುಡುಕಲಿ ಸುಡಗಾಡಾ ॥ ೪ ॥

## ೬ ದೀವಿಗಿ ಕಳಿಯೋಣ

ಕಡ್ಲಿಬೀಸೋಣ ? ಮಾವ ಗೋದೀ ಬೀಸೋಣ ?
ಕಡ್ಲಿಗಿಡ್ಲಿ ಏನ ಮಾಡ್ತೀ ಗೋದೀ ಬೀಸೋಣ ॥ ೧ ॥

ಕಡಬ ಮಾಡೋಣ ? ಮಾವ ರೊಟ್ಟಿ ಸುಡೋಣ ?
ಕಡಬಗಿಡಬ ಏನ ಮಾಡ್ತಿ ರೊಟ್ಟಿ ಸುಡೋಣ ॥ ೨ ॥

ಕೂಡಿ ಉಂಬೋಣ ? ಮಾವ ಬ್ಯಾರೆ ಉಂಬೋಣ ?
ಬ್ಯಾರೆ ಗೀರೆ ಏನ ಮಾಡ್ತಿ ಕೂಡಿ ಉಂಬೋಣ || ೩ ||

ಚ್ಯಾಪಿ ಹಾಸೋಣ ? ಮಾವ ಕೌದಿ ಹಾಸೋಣ ?
ಚ್ಯಾಪಿಗೀಪಿ ಏನ ಮಾಡ್ತಿ ಕೌದಿ ಹಾಸೋಣ || ೪ ||

ಕೂಡಿ ಮಲಗೋಣ ? ಮಾವ ಬ್ಯಾರೆ ಮಲಗೋಣ ?
ಬ್ಯಾರೆ ಗೀರೆ ಏನ ಮಾಡ್ತಿ ಕೂಡಿ ಮಲಗೋಣ || ೫ ||

ಮಾತನಾಡೋಣ ? ಮಾವ ದೀವಿಗಿ ಕಳಿಯೋಣ ?
ಮಾತಗೀತ ಏನಮಾಡ್ತಿ ದೀವಿಗಿ ಕಳಿಯೋಣ || ೬ ||

## ೭ ಕಾಕುಳ್ಳಿಗ್ಹೋಗಿ ಕಳದಾಳ

ದುಂಡನ ಮಾರಿವಳು ಗಂಜರಿಲ್ಲದ ಬಾಲಿ
ಪುಂಡಗಾರನ ಸೂಳಿ | ಕೋಲು ಕೋಲ || ೧ ||

ಕರ್‍ರನ್ನ ಹುಡಿಗ್ಯವಳು ಊದಿನ ಕಡ್ಯೇವಳು
ಕದ್ದೀಲೆ ಅವಳ ಚುವ್ಹೇಳ | ಕೋಲುಕೋಲ || ೨ ||

ತೆಳ್ಳನ್ನ ಮಾರಿವಳು ಮೆಳ್ಳಗಣ್ಣಿನವಳು
ಒಳ್ಳೊಳ್ಳೆ ಹುಡುಗರನ ಹಳ್ಳದಂಗ್ಹಾಯತಾಳೊ | ಕೋಲು ಕೋಲ || ೩ ||

ಆಕೆಪ್ಪ ನನಸೂಳಿ ಕಾಕಿ ಬಣ್ಣದ ಕಾಂ
ಉಪ್ಪರದೋಲಿ ಕಿವಿಯಾಗ ಇಟಗೊಂಡ | ಕೋಲು ಕೋಲ || ೪ ||

ಉಪ್ಪರದೋಲಿ ಕಿವಿಯಾಗ ಇಟಗೊಂಡ
ಕಾಕುಳ್ಳಿಗ್ಹೋಗಿ ಕಳದಾಳೊ | ಕೋಲುಕೋಲು || ೫ ||

## ೮ ಮೊರಿಯುವ ರಗಡೆ

ಹುಡಿಗಿ ಒಳ್ಳೆವಳೆಂದು ರಗಡಿಸಿ ಬಡಿದರ
ಕಿವಿಯಾಗಳ ಬುಗಡಿ ಜುಮ್ಕಂದಾವ ||

ಒಂಟಿಯ್ನ ಮ್ಯಾಲೆ ಗಂಟು ಮಟ್ಟೆ ಹೇರಿಕೊಂಡ
ಒಂಟರ ಮುಂದ ಮೆರಿಯುವ ರಗಡೆ ||

ಆನಿಯ್ನಮ್ಯಾಲೆ ಅಂಬಾರಿ ಹೇರಿಕೊಂಡ
ಜಾಣರ ಮುಂದ ಮೆರಿಯುವ ರಗ್ಗಡೆ ||

## ೯ ಏನು ಮೋಸವ ಮಾಡಿದಾ

ಯಾವ ದೇಸದ ರಮಣ ಬಂದು
ಏನು ಮೋಸವ ಮಾಡಿದಾ
ಆವ ಎಂತುಪಾಯವ ತೋರಿದಾ || ೧ ||

ಹಬ್ಬಕ್ ಸೀರಿ ತರತೀನೆಂದು
ಉಬ್ಬುಬ್ಬಿ ಮಾತಾಡಿದಾ
ಆವನೆಂತುಪಾಯವ ತೋರಿದಾ || ೨ ||

ಬಂಗಾರ ಬಳಿಯ ಕೊಡತೇನೆಂದು ತಿಂಗಳ ದಿನ ಬಂದಾ
ಬಂಗಾರ ಬಳಿಗೋಟು ಬೆಂಕಿ ಹಚ್ಚ್ಯಾ
ಬಂಗ ಮಾಡಿ ಹೋದಾನ || ೩ ||

ವಂಕಿ ಕೊಡತೇನೆಂನು ಬಿಂಕದ ಮಾತಾಡಿದಾ
ವಂಕಿಗೋಟು ಬೆಂಕಿ ಹಚ್ಚ್ಯಾ
ಬಂಕಾ ಮಾಡಿ ಹೋದಾನ || ೪ ||

## ೧೦ ಬಾ ಹೆಣ್ಣೆ ಮರುಳಾದೆ

ಬಾ ಹೆಣ್ಣೆ ಮರುಳಾದೆನೆ
ಬಹು ಜಾಣ್ಣೆ ಮರುಳಾದೆನೆ || ೧ ||

ಕುಂಬಳ ಹೂವಿಗೆ ಕುಂಬಳಕಾಯಿಗೆ
ಕುಂಬಾರು ಡಗಿ | ಬಾ ಹೆಣ್ಣೆ || ೨ ||

ಹಾಗಲ ಹೂವಿಗೆ ಹಾಗಲ ಕಾಯಿಗೆ
ಹಾರ್ಯೋರ‍್ಹುಡಗಿ | ಬಾ ಹೆಣ್ಣೆ ॥ ೩ ॥

ಈಚಲ ಹೂವಿಗೆ ಈಚಲ ಕಾಯಿಗೆ
ಈಡಿಗೇರ ಹುಡಗಿ | ಬಾ ಹೆಣ್ಣೆ ॥ ೪ ॥

## ೧೧ ಜೋಡಿಕಿನ್ನರ ನುಡಿಸೋ ಜಾಣಾ

ಯಾವ ರಾಜನ ಮಗನು ಬಂದು
ರಸ್ತೆ ಒಳಗ ನಿಂತುಗೊಂಡು
ಮುತ್ತಿನ ಚೆಂಡಾಡುತಾನಲ್ಲಾ ॥ ೧ ॥

ಓಣಿ ಓಣಿ ತಿರಗೋ ಜಾಣಾ
ಜೋಡಿ ಕಿನ್ನರಿ ನುಡಿಸೋ ಜಾಣಾ
ಹಲವಂಗದ್ಹುಡುಗಾ
ನಮ್ಮ ಓಣಿಗೆ ಯಾಕ ಬರಲಿಲ್ಲೊ ॥ ೨ ॥

ನಮ್ಮ ಒಣಿಗೆ ನೀನು ಬಂದರೆ
ಕರಿಯ ಕಂಬಳಿ ಗದ್ದಿಗ್ಹಾಸಿ
ತಂದುಕೊಡುವೆನು ಗಂದದೀಳೇವ ॥ ೩ ॥

ಬಾಗಿಲೊಳಗೆ ನಿಂತುಗೊಂಡು
ಬಾಗಿಬಾಗಿ ನೋಡೊ ಹೆಣ್ಣೆ
ನಾಗರ‍್ಹಾವಿನ ನಡುವಿನಂತವಳೆ
ಹಲವಂಗದ್ಹುಡಗಿ ॥ ೪ ॥

ಅತ್ತ ನೋಡ ಇತ್ತ ನೋಡ
ಚಿತ್ರಕಲ್ಲು ಗುಡ್ಡಾ ನೋಡ
ಹತ್ತಿ ನೋಡೆಲೆ ನಿನ್ನ ತವರೂರಾ
ಹಲವಂಗದ್ಹುಡಗಿ ॥ ೫ ॥

## ೧೨ ನಿನ್ನ ಕಡಗಕ ಮರುಳಾದೆ

ಬೆಡಗಿನ ಮೇಲ್‌ಪುರಿ
ಬಾವಿನೀರಿಗಿ
ಹುಡಗಿ ಒಬ್ಬಳೇ ಹೋಗತಿ
ಬಿಡಲಾರೆ ಬಾ ನಿನ್ನ
ಕಡಗಕ ಮರುಳಾದೆ
ಒತ್ತರಿ ಚೆಲ್ವಂತೆ.

ಎಂಥಾ ಮಾತು ನನಗ
ಆಡಿದೆಲೋ ಮೂರ್ಖಾ
ಸುಮ್ಮನ್ಹೋಗಣ್ಣಾ.
ಕಂಡಂತ ನಾರೇರು
ಕಣ್ಣಿಟ್ಟ ಕರದರ
ಹೋಯೀತೆ ಮೈಬಣ್ಣಾ
ಸದ್ದು ಸದ್ದು ಕಾಲಿಗೆ ಬಿದ್ದು
ಎತ್ತದಿರೊ ಆ ಸುದ್ದಿ.

ಇಳಲಿನ ರಾತ್ರಿಗಿ
ಬೋಗಕ್ಕ ಬರತೀನಿ
ಮಾಡದಿರೆಲೊ ನಿದ್ದಿ
ಬೆಂಡು ಕಜ್ಜೂರ ಕೊಂಡು ತಿಂಬೋದೆ

## ೧೩ ಸುಮ್ಮನೆ ಬಾ ಮನಿಗೆ

ಸುಳ್ಳು ಸುಗುಣಾ ಜಗಳವು ಬ್ಯಾಡಾ
ಸುಮ್ಮನೆ ಬಾ ಮನಿಗೆ ॥ ೧ ॥

ಯಾರು ಯಾರಿಗೆ ನಾನು
ಮನಸು ಕೊಡುವಳಲ್ಲಾ ॥ ೨ ॥

ಅಟ್ಟ ಹಾಳಸದದ ಬಟ್ಟಕುಚದ ಮೇಲೆ
ಸುಮ್ಮನೆ ಬಾ ಮನಿಗೆ

## ೧೪ ಹೌದಲೆ ಗಿಡ್ಡಿ

ಹೌದಲೆ ಗಿಡ್ಡಿ ಸಬಾಸಲೆ ಗಿಡ್ಡಿ ||
ಚಪ್ಪರ ಮನಿಯಾಗೊಂದ್ಹಪ್ಪಳ ಸುಡತಿದ್ದಿ
ಗಾಳಿಗೊಂದ್ಹಪ್ಪಳ ಕಳಿವ್ಯಾಳೆ ಗಿಡ್ಡಿ || ೧ ||

ಮಾಳಿಗಿ ತುಂಬಿ ಮ್ಯಾಲ ಬಾಳೋತು ಕುಂತಿದ್ದಿ
ಬಾಗಿಲ ಹಾಕ್ಕೊಂಡ್ಹೋದೆಲ್ಲ ಹುಡಿಗಿ || ೨ ||

ಮಾಳಿಗಿ ಮನಿಯಾಗ ಹೋಳಿಗಿ ಮಾಡತಿದ್ದಿ
ಗಾಳಿಗೊಂದ್ಹೋಳಗಿ ಕಳಿವ್ಯಾಳೆ ಗಿಡ್ಡಿ || ೩ ||

ಅಂಗ ನೋಡಿ ಎಂದು ಸುಂಗನೋಡಿದಂದು
ಬಾಜಾರದಾಗ ಬಂಗನೋಡಿದಂದು || ೪ ||

## ೧೫ ಚೆಂಡಹೂವಾಗಿ ಹೊರಳಿದಳಂತ

ಕೋಲು ಕೊಲೆನ್ನ ಕೋಲ
ಸಿರಿಗಂದವಿ ಕೋಲು ಕೋಲೆನ್ನ ಕೋಲ ||

ಬಡಿಗೇರ ಗೌಡನ ಸೊಸಿ ನೀರಿಗ್ಹೊಂಟಾಳಂತ
ಬೆಡಗ ಕೇಳಿ ಆಡ್ಡ ತರಬಿದನಂತ | ಕೋಲು || ೧ ||

ಬೆಡಗ ಕೇಳಿ ಆಡ್ಡ ತರಬಿದ ನಂತ | ಆ ಹುಡಗಿ
ಜ್ವಾಳಕಾಳನಾಗಿ ಸಿಡದಿದ್ದಳಂತ || ಕೋಲು ... || ೨ ||

ಜ್ವಾಳಕಾಳನಾಗಿ ಸಿಡಿದಿದ್ದಳಂತ | ಆ ಹುಡಗಾ
ಕೋಳಿ ಹುಂಜಾಗಿ ಕುಕ್ಕಿದನಂತ || ಕೋಲು .... || ೩ ||

ಕೋಳಿ ಹುಂಜಾಗಿ ಕುಕ್ಕಿದನಂತ | ಆ ಬಾಲಿ
ಗಂಗವ್ವನಾಗಿ ಹೊರಳಿದಳಂತ || ಕೋಲು || ೪ ||

ಗಂಗವ್ವನಾಗಿ ಹೊರಳಿದಳಂತ | ಆ ಹುಡಗಾ
ವಡ್ಡಗಾರನಾಗಿ ವಡ್ಡಕಟ್ಟಿದನಂತ || ಕೋಲು.... || ೫ ||

ವಡ್ಡಗಾರನಾಗಿ ವಡ್ಡ ಕಟ್ಟಿದನಂತ | ಆ ಬಾಲಿ
ಮೀನ ಮರಿಯಾಗಿ ಸಿಡದಿದ್ದಳಂತ || ಕೋಲು . || ೬ ||

ಮೀನ ಮರಿಯಾಗಿ ಸಿಡದಿದ್ದಳಂತ | ಆ ಹುಡಗಾ
ಬ್ಯಾಟೆಗಾರನಾಗಿ ಬಲಿ ಒಡ್ಡಿದನಂತ || ಕೋಲು. || ೭ ||

ಬ್ಯಾಟೆಗಾರನಾಗಿ ಬಲಿ ಒಡ್ಡಿದನಂತ | ಆ ಬಾಲಿ
ಚೆಂಡಹೂವಾಗಿ ಹೊರಳಿದಳಂತ || ಕೋಲು || ೮ ||

ಚೆಂಡಹೂವಾಗಿ ಹೊರಳಿನಳಂತ | ಆ ಹುಡಗಾ
ಪುಂಡಗಾರನಾಗಿ ಮೆರದಿದ್ದನಂತ || ಕೋಲು || ೯ ||

## ೧೬ ಕರದಾಳ ಗೆಣೆಯಾನ್ನ

ಗಾಣಿಗ್ಯಾರ್ಹೆಣ್ಣಿನ ಜಾಣತನ ನೋಡು
ಜಾಣಗಾತಿ ಆವಳ || ೧ ||

ಮ್ಯಾಬ್ಯೊಬ್ಬ ಪಂಚಾಂಗ ಮರ್ಮವ ತಿಳಿಯುತ
ಹುಡುಗನ ಬ್ರಮಿಸಿದ್ದಳೊ || ೨ ||

ಕಾಲಲಂದಗಿ ಕೈಕಟ್ಟಣ್ಣಾ
ನಡವಿಗೆ ಡಾಬಣ್ಣಾ
ಚಿನ್ನಾಮಿಗೆ ಮೂಗಿಗೆ ನತ್ತಣ್ಣಾ
ಚಂಚ ಚೌಕಳಿ ಹುಡಗನ ಕೂಡೊಂದು
ಆಟವನಾಡ್ಯಾಳಣ್ಣಾ || ೩ ||

ಕೈಯ್ಯಾಗ ಚೆರಿಗಿ ಕಾಲಾಗ ಚಪ್ಪಲಿ
ಹೊರ ಕಡಿಗೆ ಹೇಗೊ ನೆವನ
ಕಾಲುಂಗರ ಸಪ್ಪಳಮಾಡಿ
ಕರದಾಳ ಗೆಣೆಯಾನ್ನ || ೪ ||

## ೧೭ ಹೋಗೋಣು ಬೆಳತನಾ ರಾತ್ರಿ

ನೀತ್ರಿ ಕೇಳ್ ತವ್ಮ್ಮಾ ನೀನಾತುರದಿಂದ
ನಿನ್ನ ವಾಯಿನಾ ಕೇಳಿ ಬಂದೇನಿ ದೂರಕ್ ದೂರದಿಂದಾ
ತಮ್ಮ ಹಾಡೊ ನೀನೊಂದಾ ||

ಸಿಸ್ತೀಲಿ ಒರುವದು ಹೊಸ್ತೀಲ ಹುಣ್ಣಿವಿಗೆ ಎಲ್ಲಮ್ಮನಜಾತ್ರಿ
ತುಂಬ್ಯಾಳ ಸುಣ್ಣದ ಪಾತ್ರಿ
ಗಟ್ಟಿ ಮಾತೊಂದ್ ಹೇಳತೀನಿ ಗೆಣಿಯಾ
ನಿನಗೊಂದು ಕಾತ್ರಿ
ಹೋಗೋಣ ಬೆಳತನಾ ರಾತ್ರಿ ||೧||

ದೂರಲಿಂದ ತರಸೇನಿ ಗೆಳಿಯಾ ಮೂರ್‌ಪಡಿಗೋದಿ
ದೊಡ್ಡಕಲ್ಲಿಗಿ ನಡಿ
ಕಲ್ಲೊಡ್ಡಣಿಗೆ ಹಾಕೋಣ ಗೆಣಿಯಾ ಒಡಿಯಲ್ ಹಿಡಿ
ಇಬ್ಬರು ತಿರುವೋನು ಜೋಡಿ ||೨||

ಗೋಕ ರೊಕ್ಕಾ ಕೊಟ್ಟ ತಂದೀನಿ ಚಿಕ್ಕೇರಿ ಬೆಲ್ಲಾ
ಕಟ್ಟ ಮಾಡೋಣು ಮಾದ್ಲಿ
ಮಾಸ್ಯಾಕಳ ತುಪ್ಪ ತಂದೀನಿ
ಮನಗಂಡು ತಾನೆ
ಒತ್ತಿ ಕತ್ತರಿಸೊ ವೀಸಿ ||೩||

ಕಸಕಸಿ ಹಚ್ಚಿ ಕರ್ಚಿಕಾಯಿ ಮಾಡೇನಲ್ಲಾ,
ಉಣ್ಣಾಕ ಹರಕತ್ತೇನಿಲ್ಲಾ
ಬಿಸಲ ಸುಟ್ಟ ಉಸಗತಾವ್ರಿ ದೂಡಿದೂಡಿ
ಕಾಲಸುಟ್ಟ ಕರಿಮಳತಾವು ನೆರಳೀಗೆ ನಡಿ ||೪||

ಮೆಟ್ಟ ತರತೀನಿ ಜೋಡಿ
ಎಣ್ಣಿ ಹಚ್ಚಿ ಮೆತ್ತಗಮಾಡಿ
ಮೆಟಗೊಳ್ಳೊ ಮಚ್ಚಿ
ಎಣ್ಣಿ ನಾ ತಕನಾಯ್ ಬಂದು ಓದೀತೋ ಮಚ್ಚಿ
ನಾರಿ ಕುಂತಾಳ ಮೆಚ್ಚಿ ||೫||

## ೧೦ ಕಾಯೊ ನನ್ನರಸಿ

ಹುಬ್ಬಳ್ಳಿ ಕಬ್ಬಳ್ಳಿ
ಹುಬ್ಬಳ್ಳಿ ಕಬ್ಬಳ್ಳಿ
ಹಬ್ಬೀತ ರಸಬಳ್ಳಿ
ತೆಗ್ಗಿನಾಗಿರುವದು
ಕನಕಗಿರಿಯೋ | ಸ್ವಾಮಿ
ಕನಕಗಿರಿಯೋ ||೧||

ಕನಕಗಿರಿ ಜಾತ್ರೀಗಿ
ಕನಕಗಿರಿ ಜಾತ್ರೀಗಿ
ವಡ್ಡುವಾಲಗದಿಂದ
ದೊಡ್ಡವರ ಮಗಳೆಂದು
ಕಾಯೋನನ್ನರಸಿ
ಒಬ್ಬಳೊಂದಿರಲಾರೆನೋ ||೨||

ಕಾರೆಂಬ ಕತ್ತ್ಯಲ
ಕಾರೆಂಬ ಕತ್ತ್ಯಲ
ಬೋರೆಂಬ ಜಡಿಮಳಿಯೊ
ಕಾಮ ಬೀಮನೆಂಬೊ
ಕರಿಯ ತೇಜೋ | ಸ್ವಾಮಿ
ಬಿಳಿಯ ತೇಜೋ ||೩||

ಕಾಮ ಬೀಮನೆಂಬೊ
ಕಾಮ ಬೀಮನೆಂಬೊ
ಕರಿಯ ತೇಜಿಯ ಮೇಲಿ
ಪಾರ ಪಾರವನಿಟ್ಟು
ಕಾಯೊ ನನ್ನರಸಿ
ಒಬ್ಬಳೊಂದಿರಲಾರೆನೊ ||೪||

ಬಂದಾನವ್ವಾ ಓಡಿ
ತರುಬಿ ನಿಂತಾನ್ ಸಂದನೋಡಿ | ಅರೆ ಹೋ ॥ ೨ ॥

ಎಣ್ಣಿ ಬಿಲ್ಲತೀ ಜಮಿಗೇಡಿ
ನಿನಗೇನು ದಾಡಿ | ಅರೆ ಹೋ ॥ ೩ ॥

ನಿನಗೇನು ದಾಡಿ
ಕುಬಸಾ ಹರದಿ ಜಗ್ಗ್ಯಾಡಿ | ಅರೆ ಹೋ ॥ ೪ ॥

## ೨೦ ಹುಡುಗನ ಒಲ್ಲೆ

ಹೆಂಗೆ ಮನಿಗೆ ಬರಲೆವ್ವಾ | ಸುಮ್ಮಾನಗಿರ
ಹೆಂಗೆ ಮಾರಿಯ ತೋರಲೆವ್ವಾ ॥

ಹಾರಾರ ಹುಡುಗನ ಒಲ್ಲೆ ಕಾಣಕ್ಕ | ನಾ
ನೀರು ಬೇಕವನ ಜಳಕಕ್ಕ | ಸುಮ್ಮಾನಗಿರ
ನೀರೇನ ಬೇಕವನ ಜಳಕಕ್ಕ
ಯೋಳೆಂಟು ದಾರ ಬೇಕವನ ಕೊರಳಿಗೆ | ಸುಮ್ಮಾನಗಿರ ॥ ೧ ॥

ಒಕ್ಕಲಿಗ್ರ ಹುಡಗನ ಒಲ್ಲೆ ಕಾಣಕ್ಕ | ನಾ
ಗಟ್ಟಿ ಬೇಕವನ ಹಣಿ ಮ್ಯಾಕೆ | ಸುಮ್ಮಾನಗಿರ
ಗಟ್ಟೇನ ಬೇಕವನ ಹಣಿ ಮ್ಯಾಕೆ
ಯೋಳೆಂಟು ರೊಟ್ಟಿ ಬೇಕವನ ಒಡಲಿಗೆ | ಸುಮ್ಮಾನರಗಿ ॥ ೨ ॥

ಕುರುಬರ ಹುಡಗನ ಒಲ್ಲೆ ಕಾಣಕ್ಕ | ನಾ
ಕುರಿಯ ಜಿಡ್ಡವನ ಮೈಯ್ಯ ಜಿಡ್ಡೆ | ಸುಮ್ಮಾನಗಿರ
ಕುರಿಯ ಜಿಡ್ಡವನ ಮೈಯ್ಯ ಜಿಡ್ಡೆ ಅಡಿವ್ಯಾನ
ಜಾಲಿ ಕೊಡ್ಡವನ ತಲಿಗಿಂಬೆ | ಸುಮ್ಮಾನರಗಿ ॥ ೩ ॥

ಬ್ಯಾಡರ ಹುಡಗನ ಒಲ್ಲೆ ಕಾಣಕ್ಕ | ನಾ
ಪಾವಡ ಚುಂಗ ಮೂಳ ಮಾರೆ | ಸುಮ್ಮಾನಗಿರ
ಪಾವಡದ ಈ ಚುಂಗ ಮೂಳ ಮಾರೆ ಅಡಿವ್ಯಾನ
ಬ್ಯಾಟೆ ಕೋಲವನ ಕೈಯ್ಯಾಗೆ | ಸುಮ್ಮಾನಗಿರ ॥ ೪ ॥

ಅ.ಸರ ಹುಡಗನ ಒಳ್ಳೆ ಕಾಣಕ್ಕ | ನಾ
ಮ್ಯಾಲಿಗಿ ಗಂಟ ಮುಯ್ಯ ಮ್ಯಾಲಿ | ಸುಮ್ಮಾನಗಿರಿ
ಮ್ಯಾಲಿಗಿ ಗಂಟ ಮುಯ್ಯ ಮ್ಯಾಲಿ | ಊರಾನ
ಮುದ್ದಿ ಜೋಳಿಗ್ಯವನ ಕೈಯ್ಯಾಗೆ | ಸುಮ್ಮಾನಗಿರ || ೬ ||

## ೨೧ ಹೂವಿನ ಸೀರಿ ಹರದಾ

ಹ್ಯಾಗ ಮಾಡಲಿಕ್ಕಾ | ನಾ
ಯಾರ್ ಮುಂದ ಹೇಳ್ಲಿ ದುಕ್ಕಾ ||

ಚಪ್ಪರದಾಗ ಕರದಾ | ನನ್ನ
ಚಪ್ಪರ ನೆತ್ತೀ ಹರದಾ
ಹೆಂಗ ಹೋಗಲಿ ಮನಿಗೆ
ನಮ್ಮತ್ತಿ ಬೈತಾಳ್ ನನಗೆ || ೧ ||

ಹೂವಿಗಂತ ಕರದಾ | ನನ್ನ
ಹೂವಿನ ಸೀರಿ ಹರದಾ
ಹೆಂಗ ಹೋಗಲಿ ಮನಿಗೆ
ನಮ್ಮತ್ತಿ ಬೈತಾಳ್ ನನಗೆ || ೨ ||

## ೨೨ ಮಳ್ಳಗಾರ್ತಿ ಮಾದರ್ಹುಡೀಗಿ

ಕೋಲು ಕೋಲೆನ್ನ ಕೋಲೆ ||
ರನ್ನದಿ ಕೋಲು ಕೋಲೆನ್ನ ಕೋಲೆ

ಚಪ್ಪಲಿ ಮೆಟ್ಟಿಗೊಂಡು ಟಣ್ ಪಣ್ ಮಾಡ್ತಾಳೆ | ಕೋಲು.. .....
ಅಕಿ ಅಸಲಗಾರ್ತಿ ಮುಸಲರ ಹುಡಿಗಿ | ಕೋಲು... || ೧ ||

ಹಂದರದಾಗ ನಿಂತುಗೊಂಡು ನಂಜ ನೋಡತಾಳೆ | ಕೋಲು....
ಅರಿ ನಂಜಗಾರ್ತಿ ಪಿಂಜಾರ್ಹುಡಿಗಿ | ಕೋಲು. ... .. || ೨ ||

ಬೇಲ್ಯಾಗೆ ನಿಂತುಗೊಂಡು ಬೇದಾ ಮಾಡತಾಳ | ಕೋಲು....
ಅಕಿ ಬ್ಯಾಡಗಾರ್ತಿ ಬ್ಯಾಡರ್ಹುಡಿಗಿ | ಕೋಲು. . || ೩ |

ಕಳ್ಳಿ ಸಾಲಾಗ ಪುಳ್ಳಿ ಆರಸ್ತಾಳ | ಕೋಲು . .
ಅರೆ ಮಳ್ಳಗಾರ್ತಿ ಮಾದರ್ಹುಡಿಗಿ | ಕೋಲು ...... ‖ ೪ ‖

### ೨೩ ಪರದೇಸಿ ನಾನೊಬ್ಬಳಾದೇನೆ

ಹಾಸೀಗಿ ಹಾಸಿದರ ಬರನಿ | ಮೇಲ್
ಬೀಸಣಿಕೆ ಬೀಸಿದರ ಬರನಿ
ಹಾಸಿಗ್ಗೆ ತಕ್ಕಂತಾ ಪುರುಸ ಇಲ್ಲದ ಬಳಿಕ
ಪರನೇಸಿ ನಾನೊಬ್ಬಳಾದೇನೆ ‖ ೧ ‖

ಮಂಚವ ಹಾಕಿದರ ಬರನಿ | ಮೇಲ್
ಕುಂಚವ ಬೀಸಿದರ ಬರನಿ
ಮುಂಚಕ್ಕ ತಕ್ಕಂತ ಕಾಂತ ಇಲ್ಲಿದ ಬಳಿಕ
ಕೆಂಚಿ ನಾನೊಬ್ಬಳಾದೇನ ‖ ೨ ‖

ಅಂತರಲ್ಯಾಡೋ ಎರಡು ಗಿಳಿಕೂಡಿ | ಬಾಳ್
ಸಂತೋಸ ದಿನದಲ್ಲಿ ಲೋಲ್ಯಾಡಿ
ಪಂತಕ್ಕ ಗುರಿಮಾಡಿ ಹೋದಾನಲ್ಲಿ
ಪಂತಗೇಡಿ ಅಂವ ಲದಾನಲ್ಲಿ ‖ ೩ ‖

### ೨೪ ಪರಸಿ ಬರವು ತಲೆ

ಪರಸಿ ಬರುವು ತಲೆ
ದುರಗಮ್ಮನ ಜಾತ್ರ ಮಾಡುತಲೆ

ದ್ಯಾವಿಸಿಯ ಹೊಯ್ ಬೇಕು
ದಾಸಯ್ನ ಕರೀಬೇಕು
ದಾಸಯ್ನ ಕರಕೊಂಡು ದೇಸವ ನೋಡಬೇಕು ‖ ೧ ‖

ಮುದ್ದೀಯ ಮಾಡ್ಬೇಕು
ಸಿದ್ದಯ್ನ ಕರೀಬೇಕು
ಸಿದ್ದಯ್ನ ಕರಕೊಂಡು ದೇಸವ ನೋಡಬೇಕು ‖ ೨ ‖

## ೨೫ ನನ್ನ ಹುಡಿಗಿ

ಗುಲಗುಲಪಾಪಾ ತುರುಕರ ಹುಡಿಗಿ
ಹೆಂಡ ಮಾರೋ ಹೇಡಿಗೇರ ಹುಡಿಗಿ ॥ ೧ ॥

ಹಡ್ಡಗಾಲಿನ ಹಾರೋರ್ಹುಡಿಗಿ
ಬಿರ್ರನ ನಗುವಳು ಕಬ್ಬೇರ್ಹುಡಿಗಿ ॥ ೨ ॥

ತೂತಗೊಡ ಹೊತಗೊಂಡು ಮಾತಿಗೆ ಬರುವಳು
ಮಾತೇ ನನ್ನ ಮ್ಯಾದಾರ ಹುಡಿಗಿ ॥ ೩ ॥

ಒಕ್ಕಳ ಜ್ವಾಳಕ್ಕ ಲೆಕ್ಕ ಹಾಕತಾಳ
ಲೆಕ್ಕಗಾರ್ತಿ ನನ್ನ ಒಕ್ಕಲಿಗ್ರ ಹುಡಿಗಿ ॥ ೪ ॥

ತುಂಬಿದ ಅಗಸ್ಯಾಗೆ ಸೊಗಸಾಗಿ ಬರುವಳು
ಸೊಗಸುಗಾರ್ತಿ ನನ್ನ ಅಗಸರ ಹುಡಿಗಿ ॥ ೫ ॥

ಕುಂತ ಕೂರಿಗಿಮ್ಯಾಲೆ ಕುಸಲಾಗಿ ಬಿಟ್ಟಳು
ಕುಸಲಗಾರ್ತಿ ನನ್ನ ಚುತುಬರ ಹುಡಿಗಿ ॥ ೬ ॥

ತಂಗಳ ಮುದ್ದಿಗೆ ಗಂಗಾಳ ಒಡ್ಡತಾಳ
ಬಿಂಕಗಾತಿ ನನ್ನ ಜಂಗ್ಮರ್ಹುಡಿಗಿ ॥ ೭ ॥

ಹೀಡ್ ದಯಸ್ತ ದದ್ದಿಮಿತಾ
ಹೀಡ್ ದಯ್ಯೊ ದದ್ದಿಮಿತಾ ॥ ೮ ॥

## ೨೬ ಒಳ್ಳೊಳ್ಳೆ ಹುಡುಗರಿಗೆ....

ಬಿಡಬಿಡ ಎನ್ನ ಸೆರಗಾ
ಸಣ್ಣ ಹುಡುಗಾ
ಬಿಟ್ಟೆ ಕೊಡೊ ಮುಂಜೆರಗಾ ॥ ೧ ॥

ಕ್ಕೈಯಾಗ ಸುಣ್ಣಾ
ಮಾರಿ ವ್ಯಾಲೆ ಬಣ್ಣಾ
ಒಳ್ಳೊಳ್ಳೆ ಹುಡುಗರಿಗೆ ಹಚ್ಚ್ಯಾಳೊ ಹುಣ್ಣಾ || ೨ ||

ಕ್ಕೈಯಾಗ ಕಟಿಗಿ
ಒಲಿವ್ಯಾಲ ಚಟಿಗಿ
ಒಳ್ಳೊಳ್ಳೆ ಹುಡುಗರಿಗೆ ಹಾಕತಾಳ ಲಟಿಗಿ || ೩ ||

## ೨೭ ಬಂದರ ಅನುವಗೊಡಲಿಲ್ಲಾ

ಯಾಕ ಮನಿಗ್ಯಾನಲ್ಲಾ
ಬಂದರ ಅನುವಗೊಡಲಿಲ್ಲಾ ||

ಅಕ್ಕಿ ಅನ್ನದ ಬುತ್ತ್ಯೋ
ಗೆಣಿಯಾ ಗಜನಿಂಬಿಯ ಹೋಳೋ
ಅಕ್ಕಿ ಅನ್ನದ ಬುತ್ತಿ ತಲಿವ್ಯಾಲ ಹೊತಗೊಂಡು
ಹೊಲ ಹೊಲನೆಲ್ಲಾ ತಿರುಗಿದೆನಲ್ಲಾ
ತೋಟ ತೋಟನೆಲ್ಲಾ ಹುಡುಕಿದೆನಲ್ಲಾ ||

ಒಳ್ಳೆ ಹೂರಣಗಡಬೊ
ಗೆಣಿಯಾ ನಿನ್ನೆ ಕಾಸಿದ ತುಪ್ಪಾ
ಒಳ್ಳೆ ಹೂರಣಗಡಬು ಉಡಿಯಾಗ ಕಟ್ಟಿಗೊಂಡು
ಗುಡಾರನೆಲ್ಲಾ ತಿರುಗಿದೆನಲ್ಲಾ
ಗುಡಾರನೆಲ್ಲಾ ಹುಡುಕಿದೆನಲ್ಲಾ ||

## ೨೮ ಮನಿತನ ಕರಿತಾರೆ

ಮುಂಗರಂಡೇರು ಮದವಿಗಂಡಗೆ
ಮಾಡೋದಿಲ್ಲಪ್ಪ ಪ್ರೀತಿ
ಸಕ್ಕರಿಗಿಂತ ಸವಿಬಾಳೆನ್ನುತಾರೆ
ಪರಗೆಣಿಯಾನ ಸಂಗ್ತೀ || ೧ ||

ಮನಸು ಮಾಡಿ ಮುನದಾನ್ನ ಗೆಣಿಯಾ
ಮಾತನಾಡಿಸಿ ಬಾರೆ
ಛೀ ಹೋಗಲೆ ಗೆಳತಿ ಬಿಟ್ಟು ಬರಲಿ ಬ್ಯಾಡ
ಮನಿತನ ಕರಿತಾರೆ ॥ ೨ ॥

ರಂಗ ಚಾವಡಿ ಪಗಡಿ ಬಾಜಾರಾ
ಎಲ್ಲಾ ಹುಡಿಕಿದೆನಲ್ಲೆ
ಯಾವ ದೇಸಕ್ಕ ಹೋದಾನು ಗೆಣಿಯಾ
ನನ್ನ ಕರಿಯಲಿಲ್ಲೆ ॥ ೩ ॥

## ೨೯ ಎದ್ದು ಬಂದೀನಿ ಬುದ್ದಿ ಸಾಲಾದೆ

ಯಾಕೊ ನಮ್ಮ ಮನಿಯ ಮುಂದೆ
ಸೋಕೀಲಿ ಅಡ್ಡಾಡುತಿದ್ದಿ
ಯಾಕ ನಮ್ಮನ ದೂರ ಮಾಡಿದ್ದಿ
ಒಣ ಮೋಜೀನ ಹುಡುಗಾ
ಯಾಕ ನಮ್ಮನ ದೂರ ಮಾಡಿದ್ದಿ ॥ ೧ ॥

ಅತ್ತ ನೋಡೆ ಇತ್ತ ನೋಡೆ
ಒಟ್ಟಿದಂತಾ ಬಣವಿ ನೋಡೆ
ಹತ್ತಿ ನೋಡೆಲೆ ನಿನ್ನ ತವರೂರಾ
ಒಣ ಮೋಜೀನ ಹುಡುಗಿ
ಹತ್ತಿ ನೋಡೆಲೆ ನಿನ್ನ ತವರೂರಾ ॥ ೨ ॥

ನಮ್ಮವರ್ಗ ನಾನು ಹೇಳಿ
ನಿಮ್ಮವರ್ಗ ನೀನು ಹೇಳಿ
ಇಬ್ರು ಕೂಡಿ ಊರಿಗ್ಹೋಗೋಣ
ಒಣ ಮೋಜೀನ ಹುಡುಗಿ
ಇಬ್ರು ಕೂಡಿ ಊರಿಗ್ಹೋಗೋಣ ॥ ೩ ॥

ವಜ್ಜರದಂತಾ ಎಮ್ಮಿ ಬಿಟ್ಟು
ಗೆಜ್ಜಿ ಕಾಲಾನ ಮಗನ ಬಿಟ್ಟು

ಎದ್ದು ಬಂದೀನಿ ಬುದ್ದಿ ಸಾಲಾದೆ
ಒಣ ಮೋಜೀನ ಹುಡುಗಾ
ಎದ್ದು ಬಂದೀನಿ ಬುದ್ದಿ ಸಾಲಾದೆ ||೪||

ನಾನು ನೀನು ಇಬ್ರಳ ಕೂಡಿ
ಹೊಳಿ ದಂಡೀಲಿ ಚತ್ರಾ ಹಾಕಿ
ಹೊಳಿಯ ಬಂದರ ಇಬ್ಬಳ ಹೋಗೋಣ
ಒಣ ಮೋಜೀನ ಹುಡುಗಾ
ಹೊಳಿಯ ಬಂದರ ಇಬ್ರಳ ಹೋಗೋಣ ||೫||

## ೩೦ ಮಲ್ಲೀಗಿ ಸರಗಳಿಲ್ಲೀವು

ನಿಲ್ಲೊ ನಿಲ್ಲೊ ರಾಜಾ ನಿಜಗುಣ ಏನ್‌ಬಲ್ಲಿ
ಮಲ್ಲೀಗಿ ಸರಗಳಿಲ್ಲೀವು.

ಬಾಗತಿದ್ದಿ ಬಳಕತಿದ್ದಿ
ನಾಗರ್ಹಾವಿನ ಬಣ್ಣದವನೆ
ಕೋಗಿಲ್ಯಾಗಿ ಕೂಗತಿದ್ಯಲ್ಲೊ | ನಿಲ್ಲೊ....

## ೩೧ ಸೋಗಿನ ಹೆಣ್ಣೆ ನೀನು

ಹಸರಿಲಿ ಮ್ಯಾಲೆ ಬಿಸಲ್ ಬಿದ್ದಂಗೆ
ಕುಶಲದ ಕುಂಕುಮ ಹಣಿಯ ಮ್ಯಾಲೆ
ಹುಡಗೀ ಹಣಿಯ ಮ್ಯಾಲೆ
ಚಲುವೀಕೆ ನೋಡಿ ನನಗ
ಬವಳೀಕೆ ಬಂದಾಂಗಾತು
ಸಣ್ಣಾಕಿ ಕಾಣಸ್ತೀ ದಿನದಲ್ಲೆ
ಮತ್ತ ದಿನದಲ್ಲೆ

ಮಹಾರ ಹೋರಿಯಂಗೆ ಬೆದ್ವರಿ ಹೋಗತೀವಿ
ಛದುರಿ ನೆಲ್ಲ ಮೇಲೆ ನಿಲುವಲ್ಲಿ

ಸೋಗಿನ ಹೆಣ್ಣೆ ನೀನು
ಬಾಗೂತ ಬರುವಾಗ
ಗಾಬಾಗಿ ನಿಂತಾರೊ ಜನರಲ್ಲಿ
ಹುಡಗಿ ಜನರಲ್ಲಿ

### ೩೨ ದೂಳಚೆಂಜೀಲಿ ಬಾ

ಕರ‍್ರನ್ನವಳು ಬಾರೆ
ಕಣ್ಣು ಮೂಗು ತಿರುವು ಬೇಡೆ ನಾರೆ। ಕರ‍್ರನ್ನವಳ

ಕರ‍್ರನ್ನವಳು ಬಾ
ಕಾಡಿ ಕಣ್ಣವಳು ಬಾ
ದೂಳ ಚೆಂಜೀಲಿ ಬಾ
ಬೇಡಿದ್ದ ಕೊಡುವೆ। .ಕರ‍್ರನ್ನವಳು

ಬಿಸಲಿಗೆ ಬಾಡುವದು ಬಣ್ಣೆ । ಕರ‍್ರನ್ನವಳು ....

ಪಟ್ಟೆಯು ನಿಡಲಿಲ್ಲಿ । ಮಗಳೆಂದು
ದಟ್ಟೆಯು ಉಡಲಿಲ್ಲಿ
ಕೊಟ್ಟುಕೊಂಡು ಶಿವತಾ
ಒಟ್ಟಿಕೊಂಡು ಒಯ್ದಾಗ
ಹೊಟ್ಟೆ ಕಿಚ್ಚೀಲಿ ನಾ ಅಳುವೆ ನಲ್ಲಿ । ಕರ‍್ರನ್ನವಳುಬಾರೆ.. ....

### ೩೩ ಎಲ್ಲಿ ಕಲ್ತಾಳಣ್ಣಾ ಸೋಗು

ಎಲ್ಲಿ ಕಲ್ತಾಳಣ್ಣಾ ಸೋಗು
ಎಲ್ಲಿ ಕಲ್ತಾಳೊ
ಎಲ್ಲಿ ಕಲ್ತಾಳಣ್ಣಾ ಬೆಡಗು
ಎಲ್ಲಿ ಕಲ್ತಾಳೊ ॥೧॥

ವಸ್ತ್ರವಡವಿನ್ನ ಇಟ್ಟುಗೊಂಡು
ಸಿಸ್ತೀಲಿಂದ ನಿಂತುಕೊಂಡು
ರಸ್ತೀವಳಗ ಹೋಗೋ ಹುಡುಗನ
ವಸ್ತ್ರ ಬೀಸಿ ಕರದಾಳಣ್ಣಾ ॥ ೨ ॥

ಕರಿಯ ಸೀರಿನ್ನ ಉಟ್ಟುಗೊಂಡು
ಜರಿದ ಕುಪ್ಪಸ ತೊಟ್ಟುಕೊಂಡು
ಕೆರಿಯ ನೀರಿಗೆ ಹೋಗೋ ಹುಡುಗನ್ನ
ಬೆರಳ ಬೀಸಿ ಕರದಾಳಣ್ಣಾ ॥ ೩ ॥

ಗಂಜೀ ಸೀರಿನ್ನ ಉಟ್ಟುಗೊಂಡು
ಗಂದದ ಬಟ್ಟನ್ನ ಇಟ್ಟುಗೊಂಡು
ಮಂದೀ ಒಳಗ ಹೋಗೊ ಹುಡುಗನ್ನ
ತೋಳ ಬಂದೀಲಿ ಕರದಾಳಣ್ಣಾ ॥ ೪ ॥

## ೩೪ ಮೆಚ್ಚು ಬಂದೆನಾ

ಮೆಚ್ಚು ಬಂದೆನಾ
ಮೆಚ್ಚು ಬಂದೆನಕ್ಕ ನಾನು । ಮೆಚ್ಚು .

ಮೀಸಿ ಬರದ ಹುಡುಗಾ ಇವನು
ಕಾಸನಾದ್ರ ಬಾಳನವ್ವಾ
ದೇಸದೇಸಕ್ಕ ನನ್ನ ಕರದೊಯ್ದ ಅಕ್ಕಯ್ಯಾ। ಮೆಚ್ಚು. . ॥ ೧ ॥

ದೇಸದೇಸಕ್ಕ ಕರದೊಯ್ದ ಕಾರಣದಿಂದ
ಬೀಸಿ ಬಡಿಗಿ ತಗೊಂಡು
ಬೀಸ್ಯಾನೇಳ್ ಅಕ್ಕಯ್ಯಾ । ಮೆಚ್ಚು.... ॥ ೨ ॥

ಗಡ್ಡ ಬರದ ಹುಡುಗ ಇವನು
ದುಡ್ಡನಾದರ ಬಾಳನವ್ವಾ
ಗುಡ್ಡಗುಡ್ಡಕ್ಕೆ ನನ್ನ ಕರೆದೊಯ್ದಾನ್ ಅಕ್ಕಯ್ಯಾ। ಮೆಚ್ಚು.... ॥ ೩ ॥

ಗುಡ್ಡುಗಡ್ಡಕ್ಕೆ ನನ್ನ ಕರೆದೊಯ್ದು ಕಾರಣದಿಂದ
ರುಡ್ಡ ಬಡಗಿ ತಗೊಂಡು
ರುಬ್ಬ್ಯಾನೇಳಾ ಅಕ್ಕಯ್ಯಾ । ಮೆಚ್ಚು ॥ ೪ ॥

ವಜ್ಜರದಂತಾ ಎಮ್ಮಿಬಿಟ್ಟು
ಗೆಜ್ಜಿ ಕಾಲಾನ ಮಗನ ಬಿಟ್ಟು
ಎದ್ದುಹೋಗವ್ನ ಹಿಂದೆ ನಾ ಎದ್ದುಬಂದೆನಕ್ಕಯ್ಯಾ । ಮೆಚ್ಚಿ ॥ ೫ ॥

## ೩೫ ಮುದುಕಿ ಆದ್ಯಲ್ಲೆ

ಮುದುಕಿ ಆದ್ಯಲ್ಲೆ
ನಿನ್ನ ಮುರುಕವ ಬಿಡವಲ್ಲೆ

ಗಲ್ಲ ಚುಕ್ಕೇದು ವಲ್ಲೆ
ಬಾಯೊಳು ಹಲ್ಲು ಮಾಜಲಿಲ್ಲೆ
ವಲ್ಯ್ಯೊಲ್ಲೆಂದೆರ
ಗಲ್ಲವ ಕಡೀತಿ । ಮುದುಕಿ ಆದ್ಯಲ್ಲೆ ..

## ೩೬ ನೋಡಿ ಸೈರಿಸಲಾರೆ

ಕೆಂಪೆ ನೀಳೊಳೆ ಸೊಗಸೇನೆ
ನನಗೊಂದು ಇಂಪಾಗಿ ಕಾಣಸ್ತೀ ಕಾಣೆ
ಕೆಂಪು ನೋಡಿ ಮನ ಸೈರಿಸಲಾರೆ
ಭ್ರಾಂತಿ ಬಿಡಿಸಿ ನೀನು ಮಾಗಳದ ಹೆಣ್ಣೆ ॥ ೧ ॥

ನೀಲ ವರ್ಣದ ನಿಜ ಹೆಣ್ಣೆ
ಮಾವಿನ ಹೋಳು ಹಾಗಿವೆ ನಿನ ಕಣ್ಣೆ
ನೋಡಿ ಸೈರಿಸಲಾರೆ ಮೈಯ್ಯ ಬಣ್ಣಾ
ತುಂಬಿ ತುಳುಕುತ ಬಾರೆ ಗಜನಿಂಬಿಹಣ್ಣೆ ॥ ೨ ॥

ಬಟ್ಟವಾದ ಮಲಿಕಟ್ಟೆ
ಹಣೆವ್ಯಾಲಿಟ್ಟೆದಿ ಇಬತ್ತಿ ಬಟ್ಟೆ

ಬರ್‍ತೀನನ್ನೋದು ಬರೋಸು ಕೊಟ್ಟೆ
ಈ ಊರ ಬಸವಣ್ಣನ ಪಾದವ ಮುಟ್ಟೆ ॥ ೩ ॥

## ೩೭ ಬಾರೋ ನನ್ನ ಹೋಳೀ ಕಾಮಾ

ಯಾವೂರ್ ಸಿಪಾಯ್ ನೋಡೆ ರಂಗುಲಾಲಾ
ಕುಂತಾನೆ ಕುದರಿ ಮೇಲಾ
ಹೋಗತಾನೆ ನಲ್ಲಾ
ಮನಸನಾಗೇತಿ ಕೇಳ ತಂಗಿ ಅವನ ಮೇಲಾ
ಕರದರ ಬರವಲ್ಲಾ ॥ ೧ ॥

ಅವ್ವಾ ಅಕ್ಕಾ ಅಂದು ನಾ ಕರಿಯಲೇನೆ
ಕರದರ ಬಂದಾನೇನೆ
ಏನಾರಂದಾನೇನೆ
ದೋತರ ಜೋಡ್ಹಿಡಿದು ಜಗ್ಗಲೇನೆ
ಏನಾರಂದಾನೇನೆ ॥ ೨ ॥

ಬಾರ ಬಾರೊ ಬಾರೊ ನನ್ನ ಹೋಳೀ ಕಾಮಾ
ಹುಣವಿ ಚಂದುರಾಮಾ
ಪಂಚಪಾಂಡುರ ಬೀಮಾ
ನಿನಗಾಗಿ ಮಾಡುವೆನು ನಿತ್ಯನೇಮಾ
ಪತಿವರತೀ ಧರ್ಮಾ ॥ ೩ ॥

## ೩೮ ಹುಣ್ಣಿ ಒಂದ ಹಚ್ಚಿದೆಲ್ಲಾ

ಸಣ್ಣ ಸಣ್ಣ ಹುಡುಗರು
ಕಾಲ್ತುಂಬ ಗೆಜ್ಜಿ
ವಜ್ಜರದ ಗುಡಿ ಮುಂದೆ
ಕಣ್ಣೊಂದ್ಹಾಕತಾರ
ಕಂಡಕಂಡಲ್ಲಿ
ಕೆಂಪನ್ನ ಹುಡಗೀ ಮ್ಯಾಲಿ

ಕಸಕಸ ಕೊಬರಿ
ರುಸಿಬಾಳಿಹಣ್ಣ
ತಂದೀನಿ ಮಾವಿನ ಹಣ್ಣ | ಬಳ್ಳಾರಿ ಬಾಯಿ
ಅದರಾಗ ಬಂದ್ದಣ್ಣ
ತಿಂದ ನೋಡ ಸುಗುಣಾ
ಬಿಟ್ಟುಕೊಡ ಎನ್ನ ಗುಣನಾ

ಕೊಂಕಳದಾಗ ಪುಟ್ಟಿ
ಕೈಯಾಗ ಚೀಲಾ
ಹೊಂಟಾಳ್ರಿ ಸಂತೀಗಿ
ದಮ್ಮಡಿ ದಮ್ಮಡಿಗೆ
ಹೆಚ್ಚಿ ಕೊಂಬತಾಳ
ಕಮಲಾಪೂರ ಸಂತ್ಯಾಗ

ಆಕಿ ನಲ್ಲಾ
ತಂದೀನಿ ಸಕಾರಿ ಚೀಲಾ
ಮನಿ ಕಡಿಗಿ ಬರಲಿಲ್ಲಾ
ಇನ್ನೇನ ಬರಲಿ
ಪುಣ್ಣೇವುಳ್ಳ ಗರತಿ
ಹುಣ್ಣಿ ಒಂದ ಹಚ್ಚಿದೆಲ್ಲಾ

## ೩೯ ಬಂಗಾರದಂತವ್ನೆ ತಿರಿಗ್ಹೋಗ

ಅಡ್ಡಗುಡ್ಡವ ದಾಟ
ಕಗ್ಗಲ್ ಕಣಿವಿ ದಾಟ
ಕದ್ದೋಡಿ ಬಂದೆ ನಿನಗಾಗಿ
ಕದ್ದೋಡಿ ಬಂದೆ ನಿನಗಾಗಿ | ಕರೆಹುಡಿಗಿ
ಕೊಬ್ಬಿನಂತವಳೆ ದನಿ ದೋರೆ

ದನಿಹೆಂಗ ತೋರಲಿ
ಕದವ್ಹೆಂಗ ತೆರಿಯಲಿ
ಗುದಗ ಮಲಿಗ್ಯಾನೆ ಬಗಲಾಗ

ಗುದಗ ಮಲಿಗ್ಯಾನೆ ಬಗಲಾಗ । ನೀ ಇನ್ನ
ಬಂಗಾರದಂತವ್ನೆ ತಿರಿಗ್ಹೋಗ

ಮಾಳಿಗೇರಲು ಬ್ಯಾಡ
ಮಾನ ಕಳಿಯಲು ಬ್ಯಾಡ
ನಾಳೆ ನಮ್ಮನಿಗೆ ಬರಬ್ಯಾಡ
ನಾಳೆ ನಮ್ಮನಿಗೆ ಬರಬ್ಯಾಡ । ಎಲೆ ಮೂಳಾ
ಬಂಗಾರದಂತವ್ನೆ ತಿರಿಗ್ಹೋಗ

## ೪೦ ನಿರಿಗ್ಯಾಗ ಲೋಬಾನ

ಕರ್‍ರನೆ ಕರಿಬಾಲಿ
ಕಡ್ಡಿ ಮೂಗತಿ ಬಾಲಿ
ಎಲ್ಲೀತಿ ತನ್ನ ಗೆಣೆತಾನ
ಎಲ್ಲೀತಿ ತನ್ನ ಗೆಣೆತಾನ । ಹೊಸಪ್ಯಾಟಿ
ತೆಗ್ಹತ್ತಿ ತೆವರು ಇಳದಲ್ಲಿ

ಹಂಡ ಬಂಡದ ಎತ್ತು
ಬಂಡಸಾಗರವೆತ್ತು
ಸರಕಾರದೆತ್ತು ಶಿವರಾಯ
ಸರಕಾರವೆತ್ತು ಶಿವರಾಯ । ಮಾರಿದರ
ಸೂಳಿ ನಿನಸಾಲ ಪರಿಹಾರ

ನೀರಿಗೆ ಹೋಗುವಾಕಿ
ನಿರಿಗ್ಯಾಗ ಲೋಬಾನ
ಗಾಳಿ ಬೀಸಿದರ ಗಮಗಮ
ಸೂಳಿ ಬೀಸ್ಯಾಳೆ
ಕೊನಿ ಸೆರಗ

ನಾಳೆ ಹುಣ್ಣಿವಿ ಬಂತು
ಹೋಳ್ಗಿ ಮಾಡೋದು ಬಂತು
ಸೂಳೀಗಿ ಸ್ಯಾಲೆ ಕೊಡ ಬಂತು

ಸೂಳಿಗಿ ಸ್ಯಾಲೆ ಕೊಡಬಂತು | ಅಣ್ಣಯ್ಯ
ಗ್ವಾಡ್ಯಾಗ ಅಳು ಬಂತು.

ಸಾಲ ಸೂಲವ ಮಾಡಿ
ಸೂಳಿ ಸ್ಯಾಲೆ ತಂದು
ಸಾಲಗಾರಣ್ಣ ಕೈಕಟ್ಟಿ
ಸಾಲಗಾರಣ್ಣ ಕೈಕಟ್ಟಿ | ಒದಿವಾಗ
ಸೂಳಿ ಮಾಳಿಗೇರಿ ನಗುವಳು

ಹಳ್ಳ ಹರಿವದು ಕಂಡೆ
ಗುಳ್ಳಿ ತೇಲೋದ ಕಂಡೆ
ಬಳ್ಳೊಳ್ಳಿ ಕಂಡೆ ಬೈಲಾಗ
ಬಳ್ಳೊಳ್ಳಿ ಕಂಡೆ ಬೈಲಾಗ| ಎಲೆ ಹುಡುಗಿ
ಕಳ್ಳ್ಯಾಗಿ ಕಂಡೆ ಕರೆಹುಡಿಗಿ

## ೪೧ ಒಳ್ಳೆ ವರದ ಹೆಣ್ಣ

ದಾರಿ ನಿಮ್ಮ ದಾರಿ
ಒಳ್ಳೆ ವರದ ಹೆಣ್ಣ
ನಿದ್ರೆ ಇಲ್ದೆ ಉರುಳುತಾವೆ ಕಣ್ಣ.
ಹತ್ತು ವರುಸದ ಹಸರಿನ ಸೀರ್‍ಯೊಂದ್
ಒಪ್ಪುತ್ತದೆ ನಿನಗೆ
ಒಪ್ಪುತ್ತದೆ ನಿನಗೆ
ತಜನ ನತ್ತು ಮೂಗಿನೊಳಗೆ

ಹನ್ನೆರಡು ವರ್ಷದಾ ಹರೇವು ನಿಮ್ಮದು
ನಡವು ಬಾಳ ಸಣ್ಣಾ
ಎದಿಯ ಮ್ಯಾಲಿ ಕಿರಿಯ ಲಿಂಬಿ ಹಣ್ಣಾ
ಡೆಬಕಿನ ಮ್ಯಾಲಿ
ಕಲಿಕಲಿ ಸ್ಯಾರಾ
ಯಾವ ಈ ಟೀಚರಾ
ಲಾವಣಿ ಹುಟ್ಟೀತಿ ಬುಧವಾರಾ

## ೪೨ ಗಂಡನ ಮನಿಗೆ ಹೋಗತೀನಿ ಗೆಳೆಯಾ

ಸೀರಿ ಕುಪ್ಪಸ ಪಾಲಿಸ ಮಾಡು
ತಂದು ಇಟ್ಟಾರೀಗ
ಗಂಡನ ಮನಿಗೆ ಹೋಗತೀನಿ ಗೆಳೆಯಾ
ಶಿವಾ ತಂದ ಹೊತ್ತ.

ಎಣ್ಣೀ ಹೋಳಿಗಿ ಬಸ್ಸ ಸ್ಯಾವಗಿ
ಪಂಚಾಮೃತದ ಊಟ
ಮುನಾಸ ಬುಟ್ಟಿ ಹೋಗು ಬ್ಯಾಣ ಗೆಣಿಯಾ
ಉಣ್ಣು ಒಂದು ತುತ್ತ.

ಕುದರಿ ಮ್ಯಾಲಿ ಕುಂತಾಳ ನಾರಿ
ಕಣ್ಣೀರ ಸುರಸುತ್ತ
ಗೆಳತಿಯರು ಸುತ್ತಮುತ್ತ
ಗೆಳೆಯಾ ತಿರುಗುತಾನ ಬಾಯ್ ಬಾಯ್ ಬಡಕೊಂತ.

ನೀನೇನು ಹೋಗತಿ
ನನಗೇನು ಹೇಳತಿ ಕರಾರ ಮಾತನ್ನೇಳೆ.
ಮಂಗಳವಾರದ ಮರುದಿನ ಬುಧವಾರ ಬರುತೀನಿ
ಬಾರೊ ಎದುರೀಗಿ.

ನೀರಿಗೆ ಹೋಗತಿ ನಿಜವುಳ್ಳಗರತಿ
ದಾವಲ್ಲಿರತಿ ಹೇಳೆ.
ಊರ ಹೊರಗೊಂದ್ ಉಪ್ಪನೀರ್ ಬಾವಿ
ಕಳ್ಳ್ಯಾಗಿರತೇನಿ.

ಕಾಲಾಗ ಚಪಲಿ ಕೈಯಾಗ ಚರಿಗಿ
ತೆಂಬ್‌ಗೊಂಡ ನೆವನ
ಕಾಲುಂಗರ ಸಪ್ಪಳಮಾಡಿ
ಕರದಾಳ ಗೆಣೆಯಾನ್ನ.

ಕಾಮುಕಸ್ತೂರಿ ಹಚ್ಚಗೊಳ್ಳಂದರ
ಕೆಮ್ಮಣ್ಣ ಹಚ್ಚಿಗೊಂಬಳೆ

ಗಂಡಾಹೇಣ್ತೀಗೆ ವನಿಲ್ಲಾಂತ
ಉರಲ ಹಾಕ್ಯೊಂಬವಳೇ.

### ೪೩ ಹುಡುಗ ಬರತಾನ ಕರಕೋಳಿ

ಕರ್ರsನ ಕರಿಬಾಲಿ
ಕಡ್ಡಿ ಮೂಗತಿ ಬಾಲಿ
ಎಸ್ಯೇತಿ ತನ್ನ ಗೆಳತಾನ
ಎಸ್ಯೇತಿ ತನ್ನ ಗೆಳತಾನ| ಹೊಸಪ್ಯಾಟಿ
ತೆಗ್ಗತ್ತಿ ತವರ ಇಳದ್ಲಿ.

ಆ ಬಳ್ಳಿ ಈ ಬಳ್ಳಿ
ಹುಟ್ಟ್ಯೇತಿ ರಸಬಳ್ಳಿ
ತಗ್ಗಿನ್ಯಾಗ್ಯೆತಿ ಹೊಸಪ್ಯಾಟಿ
ತಗ್ಗಿನ್ಯಾಗ್ಯೆತಿ ಹೊಸಪ್ಯಾಟಿ| ಹುಡುಗರ
ಹುಬ್ಬಿನ್ಯಾಗ್ಯೆತಿ ಉಳಿನಾಮ.

ತಗ್ಗೀನ ಮನಿಯವಳೆ
ಕಡಗದ ಕೈಯ್ಯವಳೆ
ಹುಡುಗ ಬರತಾನ ಕರಕೋಳಿ
ಹುಡುಗ ಬರತಾನ ಕರಕೋಳಿ| ಅವನಿನಗ
ವಾಲೀ ತರತಾನ ಕಸಗೋಳಿ

ವಾಲಿ ಅಂದಾರೇನು
ಒಳಗಿಲ್ಲ ಬಂಗಾರ
ಸೀರೆ ಅಂದಾರೇನು ಸೆರಗಿಲ್ಲ
ಸೀರಿ ಅಂದಾರೇನು ಸೆರಗಿಲ್ಲ| ಮನಿಯಾನ
ಗಂಡ ಒಳ್ಳ್ಯಾನಂದ್ರ ಗೌಡಿಲ್ಲ.

### ೪೪ ದೀಪ ಹಚ್ಚಿದಂಗೆ ರೂಪಾ

ಚಂದ್ರನಂತಾ ಸುಂದ್ರ ಸುಪಾಯ್
ಬಂದು ಮುಂದೆ ಹೋದನವ್ವಾ

ಕಂಡು ಆತನ ವ್ಯಾಲೆ ನನ್ನ ಜೀವಾ ಜೀವಾ
ದೀಪ ಹಚ್ಚಿದಂಗೆ ರೂಪಾ
ತಾಸಗಳಿಗಿ ಆಗದು ನೆನಪು
ತಿದ್ದಿ ಹ್ಯಾಂಗೆ ಬರದಿದ್ದಾನೊ ಶಿವಾ ಶಿವಾ

ಮುವರಿ ಒತ್ತಿ ಬತ್ತಿ ಸುತ್ತಿ
ಹತ್ತಿ ಕುದರಿ ತಿರವ್ಯಾನ್ ಪೇರಿ
ಕುದರಿ ಹತ್ತಿದಾರ ಸುಪಾಯ್ ಭರ್‍ತೀಭರ್‍ತೀ
ಎಲ್ಲಿ ಕುಂತರ ಸನ್ಮಂತಿಲ್ಲ
ನಿಲ್ಲದವ್ವ ನನ್ನ ಜೀವಾ
ಹೋಗಲೇನೆ ಆತನ್ ಹಿಂಬಾಲ್ ಹತ್ತೀ ಹತ್ತೀ

ಕಾಮನಂಗೆ ಕಾಣುತಾನೆ
ಕಣ್ಣೀಲಿ ನೋಡಿ ಸ್ಥೈರಿಸಲಾರೆ
ಬಾಯ್‌ಗೆ ಸವಿ ಇಲ್ಲೆ ಅನ್ನ ರುಚೀ ರುಚೀ
ಚಿಂತೀ ಹತ್ತಿತೆವ್ವ ನನಗ
ಭ್ರಾಂತಿಗೊಂಡು ಬಳಲುವೆ
ಆತನ ವ್ಯಾಲೆ ಐತಿನಂದು ರತೀ ರತೀ

## ೪೫ ತೀರ ಸಾಗೇತ್ ನಡೆ

ಅತ್ತಿಹೂವಿನ ಸೀರಿಬೇಕ ಇಪ್ಪತ್‌ಮಳಾ
ಉಟ್‌ಗೊಂಡ್ ಕೊಡ್ರುವೇನ ಪೀತಾಂಬರಾ
ಬಂಗಾರ ದಾಗಿ ಮುಚ್ಚಬೇಕೆ ಎರಡೆ ಮಲಿ
ಬಂಗಾರದ ಕರಿಮಣಿ ಸಿಂಗಾರದ ಬಳಿ
ಬಾಗಿದರ ಬಳಕವತ್ತ ಕ್ಯಾದಿಗ್ ಗರಿ
ಸಾಗರ ಬಿದ್ದ ನಿಂದರವಂತೆ ಬೆನ್ನಿನ ಮ್ಯಾಲಾ

ಅತ್ತಿ ಹಣ್ಣನ್ನ ಮೆತ್ತಗೆ ಮಾಡಿ
ನಾಚೀತೆ ಜಡೆ
ಇಬ್ಬರೂ ಮಲಗೋನ್ನಡೆ

ಕತ್ತಲ ಮನ್ಯಾಗ ಲತ್ ಮುರದ್ಹಾಂಗಾದೀತೆ ಲೌಡಿ
ಮುರದರ ಮುರಿಯಲೇಳ ಗೆಣಿಯಾ
ಅದಕೇನ್ ದಾಡಿ.

ಎಣ್ಣಿ ಹಚ್ಚಿ ಮೆತ್ತಗ್ ಮಾಡಿ
ಮೆಟ್ಟಿಗೊಳ್ಳ ಮಚ್ಚಿ
ಮತ್ತ ನೀನೆಂಥಾ ಹುಚ್ಚಿ
ಎಣ್ಣಿನಾತಕ್ ನಾಯ್‌ಗಳು ಬಂದು
ಒಯ್ದಾವ ಮಚ್ಚಿ.
ಮತ್ತ ನೀನೆಂಥಾ ಹುಚ್ಚಿ.

ಕಾಸಿನ ರೊಕ್ಕಾ ಕೈಯೊಳಗ್ ಹಿಡಕೊಂತ ಬಿಲನ್ ನಡೆ
ತೇರಸಾಗೇತ್ ನಡೆ
ತೇರನೊಳಗ ಹಣ್ಣುಕಾಯಿ
ಒಗ್ಯೋಣ್ ನಡೆ
ಗದ್ದಲದಾಗ ಗಾಬರಿಮಾಡಿ ಹೋಗಬ್ಯಾಡೆ ಲೌಡಿ
ನಮ್ಮನ್ನ ಹುಡಕಾಂಗ ಮಾಡಿ.

## ೪೬ ಬೆಳಕಿನಾಗ ನೀನು ಬಂದ್ಹೋಗೊ

ಗಪ್ಪಡಿ ವ್ಯಾಗಳ ಕಾಳೊ
ಓಡ್ಯಾಡಿ ಮೇಯ್ವಾಗ
ಮುತ್ತೀನ ಬಾಸಿಂಗ ಮುದಿಹುಂಜ
ಮುತ್ತೀನ ಬಾಸಿಂಗ ಮುದಿಹುಂಜ | ಕೂಗಿದರ
ಚಪ್ಪನ್ನಾರು ದೇಸ ಬೆಳಗ್ಯಾವೊ. ||೧||

ತಿಪ್ಪೀ ಮಾಗಳ ಕಾಳೊ
ಒಪ್‌ದಿಂದ ಮೆಯ್ವಾಗ
ಮುತ್ತೀನ ಬಾಸಿಂಗ ಮುದಿಹುಂಜ
ಮುತ್ತೀನ ಬಾಸಿಂಗ| ಮುದಿಹುಂಜ ಕೂಗಿದರ
ಚಪ್ಪನ್ನಾರುದೇಸ ಬೆಳಗ್ಯಾವೊ ||೨||

ಅಂಚೇನಿ ಮಕದ್ದ
ಚಿಂಚ್ ಹುಂಜ ಕೂಗಿದರ
ಮಂಚದ ಮ್ಯಾಗಳ ಗಂಡ ಅಗಲ್ಹೋದ
ಮಂಚದ ಮ್ಯಾಗಳ'ಗೆಣೆಯಾ ಅಗಲ್ಯೋದ | ಎಲೆ ಬೆಕ್ಕೆ
ಪಡುಮರಿಸಿ ಗೋಣ ಮುರಿಬಾರದೇ ? ॥ ೩ ॥

ಎಲೆ ನಚ್ಚತ್ತರವ್ಹೆಣ್ಣೆ
ನಿನಗಾಗಿ ನಾನು ಕೂಗಿಲ್ಲ
ಹನ್ನೆರಡೆತ್ತಿನ ಒಕ್ಕಲ್ಗೆ ಕೂಗೀನಿ
ಹನ್ನೆರಡೆತ್ತಿನ ಒಕ್ಕಲ್ಗೆ ಕೂಗಿನಿ | ಚಿತ್ತಾರವ್ಹೆಣ್ಣೆ
ನಿನಗಾಗಿ ನಾನು ಕೂಗಿಲ್ಲ ॥ ೪ ॥

ಈಳೇವು ನಡವೇತಿ
ಪತ್ತರ ಬಂದೇತಿ
ನಾನ್ಹೋಗತೇನು ದಂಡಿಗೆ ॥ ೫ ॥

ನೀ ಹೋಗಬ್ಯಾಡ ಗಂಡ
ದಂಡೀನ ಜಗಳ ಬಲು ಜಗಳ
ಹಡದ ಅಪ್ಪನ್ನ ಕಳುವ್ರೊ
ಒಡಹುಟ್ಟಿದ ತಮ್ಮನ್ನ ಕಳುವ್ರೊ ॥ ೬ ॥

ಹಡದ ಅಪ್ಪನು ಮುಮುಕ
ಒಡಹುಟ್ಟಿದ ತಮ್ಮ ಸಣ್ಣಾ
ನನಗಾಗಿ ಬಂದೇತಿ ಕಾದೂಗಾ
ನನಗಾಗಿ ಬಂದೇತಿ ಕದಾಗಾ | ಎಲೆ ಹೆಣ್ಣೆ
ನಾನ್ಹೋಗತೀನಿ ದಂಡೀಗಿ ॥ ೭ ॥

ನೀನ್ಹೋದರ ದಂಡೀಗಿ
ಕಡದ ಕತ್ತಿಯ ಕಳುವ್ರೊ
ಮೂಗಿನೊಳಗಿನ ಮುಗ್ತೀಯ ಕಳುವ್ರೊ
ಮೂಗಿನೊಳಗಿನ ಮುಗ್ತೀಯ ಕಳುವ್ರೋ | ನಾನು
ಅದಕಾಗಿ ತೆಗಿವೆ ಬಳಿ ಕಡಗ ॥ ೮ ॥

ಗಿರಿಕಿ ಕಾಲ್ಮುರಿ ಬ್ಯಾಡ
ಕರಿಯ ಗೊಂಗಡಿ ಬ್ಯಾಡ
ಕಾವಳದಾಗ ನೀ ಬರಬ್ಯಾಡ
ಕಾವಳದಾಗ ನೀ ಬರಬ್ಯಾಡ | ಗಂಡಾ
ಕಳ್ಳನ್ನ ಮಾಡಿ ಕಡದಾರೊ ॥ ೯ ॥

ಗಂಜಿರುಮಾಲ ಬ್ಯಾಡ
ಗಂಧದ ಬಟ್ಟೆಸು ಬ್ಯಾಡ
ಬೆಳದಿಂಗಳಾಗ ಬರಬ್ಯಾಡ
ಬೆಳದಿಂಗಳಾಗ ಬರಬ್ಯಾಡ | ಗಂಡಾ
ಸುಳ್ಳನ್ನ ಮಾಡಿ ಕಡದಾರೊ ॥ ೧೦ ॥

ದೀಪ್ಯೇಗ ಎಣ್ಣೆರಲಿ
ಜ್ಯೋತೆಮ್ಮ ತುಂಬಿರಲಿ
ಬೆಳಗಿನಾಗ ನೀನು ಬಂದ್ಹೋಗೊ ॥ ೧೧ ॥

## ೪೭ ಮುಟ್ಟದಿರ ಮಲಿಯ

ಕರ್ರನ್ನವಳ ಬಾರ
ಕಾಡಿಗ್ಗಣ್ಣವಳ ಬಾರ
ಈಗಂಬ ರಾತ್ರಿಗೆ ಬೇಡಿದ್ದ ಕೊಡವೇನ

ಮಾವ ಮಾಡದಿರ
ಗಾಯವು ಗಲ್ಲ ಮಾಡದಿರ
ಆಗಬ್ಯಾಡ ಸಿಟ್ಟ
ಬೇಗನ ಉಚ್ಚಲಿ ಮಲಿಕಟ್ಟ

ಮುಟ್ಟದಿರ ಮಲಿಯ
ಹಿಂದಕೆ ಜಗ್ಗದಿರ ಜಡಿಯ
ಕಡಲೆ ಕೊಬ್ಬರಿ ಬೆಲ್ಲ
ಅಲ್ಲಿಂದುಡಲ ತುಂಬಿದಲ್ಲೆ

## ೪೮ ಯಾರೆ ಕಾಣೆ ತಂಗಿ

ಎಣಿಕಿಲೆಂಟ ಮಂದಿ
ಗೆಣೆಯರೆಲ್ಲರ ಕೂಡಿ
ಚಿಣಿಕೋಲೊಯ್ಯುವನ್ಯಾರೆ
ಚೆಂಡುಬಗರಿನಾಡುವನ್ಯಾರೆ . ॥ ೧ ॥

ಅಚ್ಚ್ಯಾನ ಮ್ಯೆಯ್ಯುವನು ಯಾರೆ
ಮುಂದಿನ್ನ
ಹಸರ್ಹೂವ ಜಗಲಿವನು ಯ್ಯಾರೆ
ನೆತ್ತೀಗೆ ಸರ್ಪವ ಸುತ್ತಿಕೊಂಡು
ಶಿವನ ಒತ್ತೀಲಿ ಇರುವವನು ಯಾರೆ ಕಾಣೆ ತಂಗಿ .... ॥ ೨ ॥

ಅಚ್ಚ್ಯಾನ ಮ್ಯೆಯ್ಯುವನು ರಾಮಾ
ಮುಂದಿನ್ನ
ಹಸರ್ಹೂವ ಜಗಲಿವನು ಭೀಮಾ
ನೆತ್ತೀಗೆ ಸರ್ಪವ ಸುತ್ತಿಕೊಂಡು
ಶಿವನ ಒತ್ತೀಲಿ ಇರುವವನು ಯಾರೆ ಕಾಣೆ ತಂಗಿ .. ॥ ೩ ॥

ಕೋಳ್ಯಾಗಿ ಕೂಗಿದವನು ಯಾರೆ
ಮುಂದಿನ್ನ
ಕಾಗಿಯ ಹಸ್ತದವನು ಯಾರೆ
ತಾಂಡೇವು ತಗೊಂಡು ಬಸವನ ತಲೆಗಳ
ಚೆಂಡಾಡಿದವನು ಯಾರೆ ಕಾಣೆ ತಂಗಿ .. ........ ॥ ೪ ॥

ಕೋಳ್ಯಾಗಿ ಕೂಗಿದವನು ಇಂದರ
ಮುಂದಿನ್ನ
ಜೋಡೆಂಬ ಕಾಗಿಯು ಹಸ್ತದವನು ಲಕ್ಷ್ಮಣ
ತಾಂಡೇವ ತಗೊಂಡು ಬಸವನ ತಲೆಗಳ
ಚೆಂಡಾಡಿದವನು ಇರಬದ್ರ ಕಾಣೆ ತಂಗಿ . ........... ॥ ೫ ॥

ಸಾಲಿ ಹಾಕಿಸಿದವನು ಯಾರೆ
ಮುಂದಿನ್ನ

ಹಿಂದಕ್ಕೆ ವಾಲಿ ಊದಿದವನು ಯಾರೆ
ಮೂವನ ಕೂಡ ಜೂಜವನಾಡಿ
ಭೂಮಿ ಸೋತವನು ಯಾರೆ ಕಾಣೆ ತಂಗಿ || ೬ ||

ಸಾಲಿ ಹಾಕಿಸಿದವನು ಸಾದೇವ
ಮುಂದಿನ್ನ
ಹಿಂದಕ್ಕೆ ವಾಲಿ ಊದಿದವನು ಅರ್ಜುನ
ಮೂವನ ಕೂಡ ಜೂಜವನಾಡಿ
ಭೂಮಿ ಸೋತವ ದರ್ಮರಾಯ ಕಾಣೆ ತಂಗಿ || ೭ ||

ಸತ್ಯದಲ್ಲಿರುವವನು ಯಾರೆ
ಮುಂದಿನ್ನ
ಭೂಮಿಗೆ ಹೆಪ್ಪು ಕೊಟ್ಟವ ಮತ್ತ್ಯಾರೆ
ಸತ್ತವರಿಗೆ ಸ್ವರ್ಗ ತೋರುವನ್ಯಾರೆ ಕಾಣೆ ತಂಗಿ || ೮ ||

ಸತ್ಯದಲ್ಲಿರುವವ ಹರಿಚಂದ್ರ
ಬೂಮಿಗೆ ಹೆಪ್ಪು ಕೊಟ್ಟಾತ ಬಸವಣ್ಣ
ಸತ್ತವರಿಗೆ ಸ್ವರ್ಗದಾರಿಗಳ ತೋರುವ
ಹೆಚ್ಚೀನ ಕುಲದ ಹರಳಯ್ಯ ಕಾಣೆ ತಂಗಿ..... . ... || ೯ ||

## ೪೯ ಕಂಚಿನ್ಹಂಗ ಹೊಳವತಾಳ

ಕಂಚಿನ್ಹಂಗ ಹೊಳವತಾಳ
ಗೊಂಚಲಬಾವಿ ಕಿವಿಯೊಳಟ್ಟು
ಪಂಚಲಿಂಗನ ಜಾತ್ರಿಗೊಬ್ಬ ಸಿಪಾಯ್ ಬಂದಾ || ೧ ||

ಒಳ್ಳೆ ಒಳ್ಳೆ ಸತಿಯರು
ಮಳ್ಳ್ಯಾಗಿ ನಿಂತಾರ
ಹೊಳ್ಳೀ ನೋಡವಲ್ಲ ಕಣ್ಣ ತೆರದಾ || ೨ ||

ಸತ್ತರ ಸಾತಿ ಪತ್ತಾರ ಹುಡಿಗಿ
ಕುತ್ತಿನ್ ಚಿನ್ನಾ ಮಾಡ್ಸಿಕೊಂಡ
ವತ್ತರದಿಂದ ಬರೆತಾಳ ಓಡ್ಯಾಡಿ | ೩ ||

ಕಡಬುಡಕಿ ಕಡ ಕಳ್ಳಿನಾಗಿ
ಕಡಕಿನಿಂದ ಬರೂವಾಗ
ನಡಕಟ್ಟ ತಂದಾಳೊಂದ ಕರೀದ್ ಮಾಡಿ || ೪ ||

ಹಂಪಿಲಿಂದ ಬರುವಾಗ
ಇಂಪಲಿಂದ ಆಕಿ ತಾನು
ಸಂಪಿಗೆಣ್ಣಿ ಹಚ್ಚತಾಳ್ರಿ ತಿದ್ದಿs ತೀಡಿ || ೫ ||

ರಾಜ್‌ಪುರದ ರಾಣಿ ಬಂದು
ಜಾಜ್ ಮಲ್ಲಿ ಹೂವಿನ್ಹಾರಾ
ಮೋಜೀಲಿ ಕೊಡತಾಳ್ರಿ ಗೆಣಿಯಾಗ್ ಮುಡಿ ಮುಡಿ || ೬ ||

ಆದ್ಯಾಳ್ ಬೂದ್ಯಾಳ್ ಮುದಕಿ
ಹಾದೀ ಹಿಡದ ಬರೂವಾಗ
ಹಾದೀ ಹಿಡದ ಸೋರತತ್ರಿ ಬಾಯೊಳ್ ಜೊಲ್ಲಾ || ೭ ||

ಅಯ್ಯಯ್ಯ ಎನ್ ಹಣೇಬರಾ
ಮಯ್ಯಾಗೇನೂ ಸೊಗಸಿಲ್ರಿ
ಕಯ್ಯಾಗ ಹಿಡದಾಳ್ರಿ ಒಂದು ಬಿದರ್ ಕೋಲಾ || ೮ ||

ಎಲ್ಲಾಪುರದ ಮಲ್ಲಿ ಬಂದು
ಎಲ್ಲಾ ಮಂದಿನ್ನ ಕೇಳತಾಳ್ರಿ
ನಲ್ಲ ಇರೋ ಜಾಗವು ಯ್ಯಾವ್ ಕಡೆ || ೯ ||

ಮುಲ್ಲ ಮುಸಲರ ಎಲ್ಲಾ ಕಲತ
ನಿಲ್ಲ ದೋಡಿ ಹೋಗುವಾಗ
ಮುಲ್ಲರ ಕಾಸೀಮ ಸಾಬನಲ್ಲೆ ಮುರದಾನಲ್ಲಾ || ೧೦ ||

## ೫೦ ಬೆಕ್ಕಿನ ಮರಿಯಾಗಿ ಹಿಡದಾಳೊ

ತೆಂಗಿನ ಸಿಪ್ಪು ತೆಗೆದ ಬೆಂಕಿಗೆ ಓದಲ್ಲಿ
ಚಿಗರಿ ಮರಿಯಾಗಿ ಪುಟದಾಳೆ

ರನ್ನಾದಿ ಕೋಲು ಕೋಲೆನ್ನ ಕೋಲ
ಸಿರಿಗಂದದಿ ಕೋಲು ಕೋಲೆನ್ನ ಕೋಲೆ ॥ ೧ ॥

ಚಿಗರಿ ಮರಿಯಾಗಿ ಪುಟದಾಗ ಎಲೆ ಹುಡುಗ
ಬ್ಯಾಟೆಗಾರಾಗಿ ಹೊಡೆದಾನೆ
ರನ್ನಾದಿ ಕೋಲು ಕೋಲೆನ್ನ ಕೋಲೆ
ಸಿರಿಗಂದದಿ ಕೋಲು ಕೋಲೆನ್ನ ಕೋಲೇ ॥ ೨ ॥

ಬ್ಯಾಟೆಗಾರಾಗಿ ಹೊಡೆದಾಗ ಎಲೆ ಹುಡುಗಿ
ಜಾಲಿಯ ಮುಳ್ಳಾಗಿ ಕಾಲಾಗ ಮುರದಾಳೆ
ರನ್ನಾದಿ ಕೋಲು ಕೋಲೆನ್ನ ಕೋಲೆ
ಸಿರಿಗಂದದಿ ಕೋಲು ಕೋಲೆನ್ನ ಕೋಲೆ ॥ ೩ ॥

ಜಾಲಿಯ ಮುಳ್ಳಾಗಿ ಮುರದಾಗೊಂದೆಲೆ ಹುಡುಗ
ಜಾಲಗಾರ ಹುಡುಗಾಗಿ ಬಗದಾನೆ
ರನ್ನಾದಿ ಕೋಲು ಕೋಲೆನ್ನ ಕೋಲೆ
ಸಿರಿಗಂದದಿ ಕೋಲು ಕೋಲೆನ್ನ ಕೋಲೆ ॥ ೪ ॥

ಜಾಲಗಾರ ಹುಡುಗಾಗಿ ಬಗದಾಗೊಂದೆಲೆ ಹುಡುಗಿ
ಹರಿಯೊ ಗಂಗಮ್ಮನಾಗಿ ಹರದಾಳೆ
ರನ್ನಾದಿ ಕೋಲು ಕೋಲೆನ್ನ ಕೋಲೆ
ಸಿರಿಗಂದದಿ ಕೋಲು ಕೋಲೆನ್ನ ಕೋಲೆ ॥ ೫ ॥

ಹರಿಯೊ ಗಂಗಮ್ಮನಾಗಿ ಹರದಾಗೊಂದೆಲೆ ಹುಡುಗ
ಅಡ್ಡಗುಡ್ಡಾಗಿ ತರುಬ್ಯಾನೊ
ರನ್ನಾದಿ ಕೋಲು ಕೋಲೆನ್ನ ಕೋಲೆ
ಸಿರಿಗಂದದಿ ಕೋಲು ಕೋಲೆನ್ನ ಕೋಲೆ ॥ ೬ ॥

ಅಡ್ಡಗುಡ್ಡಾಗಿ ತರುಬಿದಾಗೊಂದೆಲೆ ಹುಡುಗಿ
ಸಣ್ಣ ಮೀನಾಗಿ ಸುರಿಗ್ಯಾಳೆ
ರನ್ನಾದಿ ಕೋಲು ಕೋಲೆನ್ನ ಕೋಲೆ
ಸಿರಿಗಂದದಿ ಕೋಲು ಕೋಲೆನ್ನ ಕೋಲೆ ॥ ೭ ॥

ಸಣ್ಣ ಮೀನಾಗಿ ಸುರಿಗ್ಯಾಗೊಂದೆಲೆ ಹುಡುಗ
ಸಣ್ಣನೆ ಬಲಿ ಹಾಕಿ ಹಿಡದಾನ

ರನ್ನಾದಿ ಕೋಲು ಕೋಲೆನ್ನ ಕೋಲೆ
ಸಿರಿಗಂದದಿ ಕೋಲು ಕೋಲೆನ್ನ ಕೋಲೆ || ೮ ||

ಸಣ್ಣನೆ ಬಲಿಹಾಕಿ ಹಿಡದಾಗೊಂದೆಲೆ ಹುಡುಗಿ
ರತ್ನ ಮುತ್ತಾಗಿ ಸುರದಾಳೊ
ರನ್ನಾದಿ ಕೋಲು ಕೋಲೆನ್ನ ಕೋಲೆ
ಸಿರಿಗಂದದಿ ಕೋಲು ಕೋಲೆನ್ನ ಕೋಲೆ || ೯ ||

ರತ್ನ ಮುತ್ತಾಗಿ ಸುರಿದಾಗೊಂದೆಲೆ ಹುಡುಗ
ಕೋಳಿ ಹುಂಜಾಗಿ ಆರಿಸ್ಯಾನೆ
ರನ್ನಾದಿ ಕೋಲು ಕೋಲೆನ್ನ ಕೋಲೆ
ಸಿರಿಗಂದದಿ ಕೋಲು ಕೋಲೆನ್ನ ಕೋಲೆ || ೧೦ ||

ಕೋಳಿ ಹುಂಜಾಗಿ ಆರಿಸ್ಯಾನೊ ಎಲೆ ಹುಡುಗಿ
ಬೆಕ್ಕಿನ ಮರಿಯಾಗಿ ಹಿಡದಾಳೊ
ರನ್ನಾದಿ ಕೋಲು ಕೋಲೆನ್ನ ಕೋಲೆ
ಸಿರಿಗಂದದಿ ಕೋಲು ಕೋಲೆನ್ನ ಕೋಲೆ || ೧೧ ||

## ೫೧ ಹೋಗತೀನೆಂಬುದು ಮರಿಯೋ

ಹೋಗತೀನೆಂಬುದು ಮರಿಯೋ | ನಾಳೆ
ಹೋಗಿ ಬರವರ ಕೂಟ ಹೇಳೆನ್ನ ಕಳುವೊ | ಹೋಗತೀನೆಂಬುದ

ಮೂರು ಜೆಜ್ಜಯ ರೊಟ್ಟಿ
ಮೂರು ಜೆಜ್ಜಯ ರೊಟ್ಟಿ
ಒಂಬತ್ತು ಬಾಳೀ ಹಣ್ಣು
ಬಾಗಲ್ ದಾಗಿಟ್ಟೇನಿ
ಸುಣ್ಣದ ನೆವ ಮಾಡಿ
ಸುಮ್ಮನೆ ಒಯ್ಯೋ | ಹೋಗತೀನೆಂಬುದ....

ಆ ಹುಲ್ಲು ಈ ಹುಲ್ಲು
ಆ ಹುಲ್ಲು ಈ ಹುಲ್ಲು
ನೆಗಳ್ ಗಣೆ ಕಾರತೀನಿ

ಕರೇ ಬಳ್ಳೀಲಿ
ಹೊರೀ ಕಟ್ಟಿಕೊಂಡ
ನಾನ್ ಬರ್ತೀನಿ ಗೆಣೆಯಾ | ಹೋಗತೀನೆಂಬುದ ....

ನಮ್ಮೂರು ನಿಮ್ಮೂರು
ನಮ್ಮೂರು ನಿಮ್ಮೂರು
ಸಿರಬಿ ಮೂಗಾನೂರು
ಹೋದೇ ನಂದರ | ನಾ
ಹೋದೇನಂದ
ಉಳವಿಲ್ಲೋ ಜಾಣಾ | ಹೋಗತೀನಂಬುದ.

ಅಂಗಡಿ ಮನಿಯಾಗ
ನನ್ನಂತಾ ಬಾಲೇರು
ಬಾಳ್ ಮಂದಿ ಇರುವರು
ಅವರನ್ನ ನೋಡಿ| ನೀ
ಅವರನ್ನ ನೋಡಿನೀ
ಹೊತ್ತನ್ನ ಕಳಿಯೋ | ಹೋಗತೀನೆಂಬುವ ..

ಗುಂಡೀನ್ ಮ್ಯಾಲ ಗುಂಡು
ತೆಳಗ ಬಿದ್ದದ ತುಂಡು
ನೀರ ತರುವಳು ಗಂಡಿ
ಮಲಿ ಬಂದ ಮಿಂಡೇರ್ನ | ನಾ
ಮಲಿ ಬಂದ ಮಿಂಡೇರ್ನ
ಹೋಗೋದು ಕಂಡೆ | ಹೋಗತೀನೆಂಬುದು

## ೫೨ ಪ್ರೀತಿ ತಗ್ಗಿತ ಅರ್ಧ ತಾಸಿನೊಳಗ

ಚಿಕ್ಕ ಪ್ರಾಯಕ್ಕ ಮಾಡಿಕೊಡಬ್ಯಾಡ್ರಿ
ದೂರದ ದೇಸಕ್ಕ ಮಾಡಿಕೊಡಬ್ಯಾಡ್ರಿ
ಅಲ್ಲಿ ಹೋಗಿ ನಾ ಬಾಳೇವ್ ಹೆಂಗ ಮಾಡಲಿ
ಅರಿಯೆ ಗಂಡನ ಗುರತ ||೧||

ನಿನ್ನ ಬಿಟ್ಟ ನಾ ಹೆಂಗ ಹೋಗಲಿ
ನನ್ನ ಜೀವದ ಗೆಣೆಯಾ
ಓಣ್ಯಾಗ ನಾಲ್ವರು ಗೆಣೆತ್ಯಾರಿಗೆ
ಹೇಳಿಬಾರೆ ನಗತಿ || ೨ ||

ನೆನಕ್ಕಿ ನೆನಗಡಲಿ ಬೆಳ್ಳ[redacted]ನಾ
ಮಾಡೇನಿ ಮನಿಯಾಗ
ಉಂಡು ಉಟ್ಟು ಸುಖವ ಬಿಟ್ಟು
ನಾರಿ ಹೊರಟಾಳಂತ || ೩ ||

ನೀನು ಹೋದ ಮೂರದಿವಸದ ಮ್ಯಾಲ
ಬರುವೆನ ನಿನ ಸುತ್ತ
ಹಿಗೆಣೆತಿ ಹೋದ ಮೂರು ದಿನದ ಮ್ಯಾಲ
ಗೆಣೆಯಾ ಹೊರಟಾನಂತ || ೪ ||

ಸನ್ಯಾಸಿ ರೂಪ ತಾಳಿಕೊಂಡು
ಊರ ಬಿಟ್ಟನಂತ
ಆ ಮನಿ ಈ ಮನಿ ಬಿಕ್ಷಾ ಬೇಡುತ
ಗೆಣತಿ ಮನಿಗೆ ನಿಂತನಂತ || ೫ ||

ಗೋಳಾಟ ಮಾಡಿ ಬಾಳ್ಗೊತ್ತ ನಿಂತ
ಗೆಣತಿ ಮನಿಯ ಮುಂದ
ಗೆಣೆಯಾನ ಕೂಗಾ ಹಿಡದ ಬಿಕ್ಷಾ ನೀಡಾಕ
ಗೆಣತಿ ಹೊಂಟಾಳಂತ || ೬ ||

ಚೇಳಕಡದ ನೆವನ ಮಾಡಿ
ಮಲಿಗ್ಯಾಳ ಕ್ವಾಣ್ಯಾಗ
ಚೇಳಿನ ಬಾದಿ ಬಲು ಬಾದಿ
ಅತ್ತಿ ತಾಳಲಾರೆನೆ ನಾ || ೭ ||

ಸನ್ಯಾಸಿ ಮಟದಾಗ ಬಾವಾ ಬಂದಾನ
ಕರಿತಾರ ಹೋಗತ್ತಿ
ನನ್ನ ಮನಿಯಾಗಳ ಹಿರಿಯ ಸೊಸಿಗೆ
ಕಡದತರಿ ಚೋಳಾ ದಯಮಾಡಿರಿ ಬೇಗಾ || ೮ ||

ನಿನ್ನ ಮನಿಯ ಹಿರಿಯ ಸೊಸಿಗೆ
ಚೀಳು ಇಳಸ್ತೀನಿ
ನನಗೆ ಏನ ಕೊಡತೀ
ನೀನು ನನಗ ಏನ ಕೊಡತೀ ||೯||

ನಾಕು ರಾಜ್ಯವು ಸವನ
ಸಂಗನಪ್ಪನೂರಾಗ
ಅರ್ಧ ರೂಪಾಯಿಕೊಟ್ಟು
ಅವಸುದ್ದೀವು ನಾ ತನ್ನಿ ||೧೦||

ಗದ್ದಲ ಬಾಳ ತರವಲ್ಲಂದ
ಹೊರಿಯಕ ನಡಿಯಂದ
ನಾಕು ಬಾಗಿಲಾ ಗಟ್ಟಿ ಮುಚ್ಚರಿ
ಗಾಳಿ ಬಾರದಂತೆ ||೧೧||

ನಾಕು ಬಾಗಿಲಾ ಗಟ್ಟಿ ಮುಚ್ಚಿದಾರ
ಗಾಳಿ ಬಾರದಂತೆ
ಗೆಣತಿ ಗೆಣೆಯಾನ ಪ್ರೀತಿ ತಗ್ಗಿತ
ಅರ್ಧ ತಾಸಿನೊಳಗ ||೧೨||

## ೫೩. ಹಾದ ಹೋಗವಳ ಮಲಿ ನೋಡು

ಹಾದೀಯ ಹೊಲ ನೋಡು ಗೋದೀಯ ತೆನಿ ನೋಡು
ಹಾದ ಹೋಗವಳ ಮಲಿ ನೋಡು
ಹಾದ ಹೋಗವಳ ಮಲಿ ನೋಡು | ಆ ಬಾಲಿ
ಹಾದೀಲಿ ಹುವ್ವ ಚೆಲ್ಲ್ಯಾಳು ||೧||

ಟೀಕೀನ ಕಟ್ಯಾಳ ಟೀಕೀಲಿ ನಿಂತಾಳ
ಆಕಿ ನಮಗೇನ ಇರತಾಳೊ
ಆಕಿ ನಮಗೇನ ಇರತಾಳೊ | ಆ ಬಾಲಿ
ಕಳ್ಳ್ಯಾಗುಳ್ಳ್ಯಾಡಿ ಬರತಾಳೊ ||೨||

ಚಂದ್ರಕಾಳಿಯ ಸೀರಿ ಚಂದೇನ ಇವಳಿಗೆ
ಸಂದೂಕದಾಗ ಇರುವದು
ಸಂದೂಕದಾಗ ಇರುವದು | ಸೇರಿನ ಡಾಬು
ಚಂದೇನ ಇವಳ ನಡವೀಗೆ || ೩ ||

ಉತ್ತತ್ತಿ ಬಣ್ಣದ್‌ಸೀರಿ ಉಡಲಾಗ್ ತೆಂಗಿನಕಾಯಿ
ಎಡಗಯ್ಯಲೆಡಿಯ ಹಿಡದಾಳೊ
ಎಡಗಯ್ಯಲೆಡಿಯ ಹಿಡದಾಳೊ | ಆ ಬಾಲಿ
ನಾಗಪ್ಪಗ್ಹಾಲ ಎರದಾಳೊ || ೪ ||

ಕಾಗಿಯ ಕರಿಯಲಿ ಕುಳಬಾಣಸರಿಯಲಿ
ಕರಿ ಹುಡಗಿ ನಮುಗ ಒಲಿಯಲಿ
ಕರಿ ಹುಡಗಿ ನಮುಗ ಒಲಿಯಲಿ | ಕರಿಹನುಮಗ
ಕರಿ ಕಣ್ಣುಗಳ ಕಾಯಿ ಒಡಿಸೇನೊ || ೫ ||

ಬಂಗಾರ ಬಳಿಯುವಳು ಬಂಗಿ ಕುಪ್ಪಸದವಳು
ಬಂದಿದ್ದಾಳೇನೊ ಜಾತರಿಗಿ
ಒಂದಿದ್ದಾಳೇನೊ ಜಾತರಿಗಿ | ಆ ಬಾಲಿ
ತಂದಿದ್ದಾಳೇನೊ ಕರಿಗಡಬ || ೬ ||

ಕಂಡದ್ದು ಕಲ್ಲಳ್ಳಿ ಕೆಡಸೊ ಕೊನ್ನಕನ್ಹಳ್ಳಿ
ಅರಸಪತಿಯೆಂಬೊ ಹೊಸಪ್ಯಾಟಿ
ಅರಸಪತಿಯೆಂಬೊ ಹೊಸಪ್ಯಾಟಿ | ಬಸವೇರು
ಹರಸೀಗೆ ಹೊರಸ ಹಾಕೋರು || ೭ ||

ಗೌಡ ಗಂಬೀರಲ್ಲ ಕಾಡು ಮುತ್ತನಲ್ಲ
ಓಡಲಕಾಯಿ ಬೆಳಸಲ್ಲ
ಓಡಲಕಾಯಿ ಬೆಳಸಲ್ಲ | ಹೊಸಪ್ಯಾಟಿ
ಗೌಡ ನಿನ ಮಗಳು ಗರತೆಲ್ಲ || ೮ ||

## ೫೪ ಅಕ್ಕಿಯ ಒಬ್ಬಿ ಸುರತಾವ್

ಕೆರಿಯ ಕಬ್ಬಿನ ಕೋಲು ಗರಿಒಡದ ಸೂಲಂಗಿ
ಕೆರಿ ಏರಿ ಮ್ಯಾಲಿ ಬರುವೇನ್ ಅಕ್ಕಯ್ಯಾ ॥ ೧ ॥

ಕೆರಿಯ ಏರಿ ಮ್ಯಾಲೆ ಬರುವಾಗ ನಾ ಕಂಡು
ನಾಗರದ ಮುಳ್ಳ ತುಳದೇನ್ ಅಕ್ಕಯ್ಯಾ ॥ ೨ ॥

ನಾಗರದ ಏ ಮುಳ್ಳ ತುದಲುಂಟಾದರ
ಉಗರಿಲ್ಲದ ಜಾಣಾ ತಗದಾನ್ ಅಕ್ಕಯ್ಯಾ ॥ ೩ ॥

ಅಕ್ಕಿಯ ಕುಟ್ಟುತ ಚಕ್ಕಂದನಾಡುತ
ಚಿಕ್ಕಂದಿನ ಗೆಣಿಯಾನ್ ನೆನಸುವೆನ್ ಅಕ್ಕಯ್ಯಾ ॥ ೪ ॥

ಚಿಕ್ಕಂದಿನ ಗೆಣಿಯಾನ್ ನೆನಸಲುಂಟಾದರ
ಅಕ್ಕಿಯ ಒಬ್ಬಿ ಸುರತಾವ್ ಅಕ್ಕಯ್ಯಾ ॥ ೫ ॥

ಜ್ವಾಳವ ಬೀಸುತ ಜೋಗುಳ ಪಾಡತ
ಜೋಡೀನ ಗೆಣಿಯಾನ್ ನೆನಸುವೆನ್ ಅಕ್ಕಯ್ಯಾ ॥ ೬ ॥

ಜೋಡೀನ ಗೆಣಿಯಾನ್ ನೆನಸಲುಂಟಾದರ
ಜ್ವಾಳದ ಒಬ್ಬಿ ಸುರತಾವ್ ಅಕ್ಕಯ್ಯಾ ॥ ೭ ॥

ರಾಗೀಯ ಬೀಸುತ ರಾಗವ ಮಾಡುತ
ರಾಯರ ಮಗನ ನೆನಸುವೆನ್ ಅಕ್ಕಯ್ಯಾ ॥ ೮ ॥

ರಾಯರ ಮಗನ ನೆನಸಲುಂಟಾದರ
ರಾಗೀಯ ಒಬ್ಬಿ ಸುರತಾವ್ ಅಕ್ಕಯ್ಯಾ ॥ ೯ ॥

ಗಂಟು ಮಾರಿಯ ಬಳ್ಳಿ ತೊಂಡಿಗೆ ದುರಗಿ
ಗಂಟು ಮಾರ್‍ಯವಳ ಗೆಳತಾನ್ ಅಕ್ಕಯ್ಯಾ ॥ ೧೦ ॥

ಗಂಟು ಮಾರ್‍ಯವಳ ಗೆಳತಾನ ಮಾಡಿದರ
ಎಂಟೆಂಟು ದಿನಕೆ ಕದನವ್ ಅಕ್ಕಯ್ಯಾ ॥ ೧೧ ॥

ದೂರದ ಮಲ್ಲಿಗಿ ದುರುಗದ ಕ್ಯಾದಿಗಿ
ಹೊಳಿಯು ಹೊನ್ನೂರ ದವನವ್ ಅಕ್ಕಯ್ಯಾ ||೧೨||

ಹೊಳಿಯ ಹೊನ್ನೂರ ದವನವ ತರಿಸಿದರ
ತುರುಬಿದ್ದ ಜಾಣಿಗೆ ಮುಡಿಸೇ ಅಕ್ಕಯ್ಯಾ ||೧೩||

## ೫೫ ಇಬ್ಬರೂ ಕಲಿಯೋನು ರಾತ್ರಿ

ಸಿಸ್ತಬಾಳ್ ಹೊಸ್ಲೀಹುಣವಿ
ಎಲ್ಲವ್ನ ಜಾತ್ರಿ | ತುಂಬ ಸುಣ್ಣದ ಪಾತ್ರಿ
ಗುಟ್ಟ ಮಾತೊಂದ್ ಹೇಳತೀನಿ ಗೆಣಿಯಾ
ನಿನಗೊಂದ ಕಾತ್ರಿ
ಇಬ್ಬರೂ ಕಲಿಯೋನು ರಾತ್ರಿ ||೧||

ದೂರಲದಾರಿನಂತ ಬೀಸೀನಿ ಮೂರಸಡಿಗೋದಿ
ಮಾಡೀನಿ ಬೆಳತಾನಾ ನಾದಿ
ಸಜ್ಜ ಸಾಹಿತಾ ಎಲ್ಲಾ ಮಾಡಿ
ಕಟ್ಟೀನೊ ಬುತ್ತಿ
ಹಾದ್ಯಾಗ ಹಸಗೊಂಡ ಸತ್ತೀ ||೨||

ದುಂದಗಾಂವಿಲಿಂದ ತರೀಸೀನಿ ಕುತನೀ ಯ ಚಣ್ಣಾ
ಅಚ್ಚ ಹಳದಿಯ ಬಣ್ಣಾ
ಸುತ್ತಮುತ್ತ ಬಿದ್ದಿರಬೇಕ
ನಡ ಕಟ್ಟನ ಜುಮುನಾ
ಬಿದ್ದಂಗೆ ಸೂರ್ಯಾನ ಕಿರಣಾ ||೩||

ಎಣ್ಣಿ ಹಚ್ಚಿ ಮೆತ್ತಗ ಮಾಡೀನಿ
ಮೆಟಗೊಳ್ಳೊ ಮಚ್ಚಿ
ನಾ ಬರತೀನಿ ಮೆಚ್ಚಿ
ಎಣ್ಣಿ ನಾತಿಗಿ ನಾಯ ಬಂದೋದಾವೊ ಮುಚ್ಚಿ
ಹುಡಿಗಿ ಕುಂತಾಳೊ ಹುಚ್ಚಿ ||೪||

ಮಳಿಯ ಗಾಳಿ ಬೀಸೀತೆಂದು
ತರಿಸೀನಿ ಕೊಡಿ | ಕೈಯ್ಯಾಗ್
ಹಿಡಕೊಂಡು ನಡಿ
ಯಾರ್ ಗೊಡವಿ ಏನ್ ಸುಟ್ಟ ಸುಮ್ಮನ್‌ನಡಿ
ಕಟ್ಟೋ ಚಕ್ಕರ ಗಾಡಿ || ೫ ||

ಮಾಸು ಆಕಳ ತುಪ್ಪಾ ತಂದೇನಿ
ಮನಗಂಡು ಕಾಸಿ
ಬಿಡು ನಿನ್ನ ಸತಿಯಳ ಆಸಿ
ತಂಡಿಗಾಳಿ ಬೀಸಿಕೊಂದು ಎತಗಂಡುಕಾಸಿ
ಮೇಲ್ ಕತ್ತರಸೋ ಮಿಸಿ || ೬ ||

ಕಡಿಯಳ ಪುರುಸನ ಸಂಗಾಮಾಡಿದರ
ಕಡಿತನಕ ದಂಡಾ
ಆಗಲಿಲ್ಲ ಮನಿಯಾಳ ಗಂಡಾ
ಜಾತ್ರಿಗೆಂತ ಹೋಗಿದ್ದು ಸೂಳೀಯು ಮಿಡಾ
ಆತೊ ಎಲ್ಲವನ ಬಂಡಾ || ೭ ||

## ೫೬ ಹೊಳಿಯ ಬಂದರ ತೇಲಿ ಹೋಗೋಣ

ಒಪ್ಪಿತೆ ಒಪ್ಪಿತೆ ಬಳಿ
ಒಪ್ಪಿತೆ ಚಿನ್ನದ ಬಳಿ
ತಗ್ಗಿನ್ಯಾಗ ದನಿಯ ಕೊಟ್ಟಿಲ್ಲಾ
ದನಿಯ ಕೊಟ್ಟ ಮೂರ ದಿವಸಕ
ಕಣ್ಣ ರೆಪ್ಪಿ ನುಣ್ಣಗಾಗಿ
ತಣ್ಣಗೊಂದಿವ್ಸ ಮಲಗಲಿಲ್ಲಾ || ೧ ||

ಓಣಿ ಓಣಿ ತಿರಗೋ ಜಾಣ
ಜೋಡ ಕಿನ್ನರಿ ನುಡಸೋ ಜಾಣ
ನಮ್ಮ ಓಣಿಗ್ಯಾಕ ಬರಲಿಲ್ಲಾ
ನಿಮ್ಮ ಓಣಿಗಿ ನಾನು ಬಂದರ

ನಿನ್ನ ಗಂಡ ಮನಿಯಾಗ ಪೋರಿ
ನಿನ್ನ ಮ್ಯಾಲ ಅವನು ಮುನದಾನ
ಬ್ಯಾಡರ್ಹುಡಗಿ ಅವನು ಮುನದಾನ || ೨ ||

ಕ್ವಾಟಿವ್ಯಾಲ ನಿಂತಕೊಂಡು
ನಾಗರ ನಡಕಟ್ಟಿ ಸುತ್ತಿ
ಕೋಗಿಲಂಗೆ ದನಿಯ ಕೊಡುವನೆ
ಯಾವೂರ ದೊರಿ ಬಂದು
ರಸ್ತೆದೊಳಗ ನಿಂತುಕೊಂಡು
ಮುತ್ತಿನಾ ಸೆಂಡಾಡುತಾನಲ್ಲಾ
ಸಣ್ಣ ನಾಮದ್ಹುಡಗಾ
ರತ್ನದಾ ಬಗರಿಯಾಡತಾನಲ್ಲಾ || ೩ ||

ನಮ್ಮ ಓಣಿಗಿ ನೀನು ಬಂದರ
ಕರಿಯ ಕಂಬಳಿ ಗದ್ದಿಗಿ ಮಾಡಿ
ಗಂದದಿಳೀವು ತಂದ ಕೊಡುವೆನು
ಊರಿಗಂತ ನೀನು ಬಾರ
ನೀರಿಗಂತ ನಾನು ಬರತೇನ
ಇಬ್ಬರು ಕೂಡಿ ಎದ್ದಹೋಗೋಣ
ಹೊಳಿಯ ದಂಡಿಲಿ ಗುಡಸಲ್ಹಾಕಿ
ಹೊಳಿಯ ಬಂದರ ತೇಲಿ ಹೋಗೋಣ || ೪ |

ರತ್ನದಂತಾ ಮಗನ ಬಿಟ್ಟ
ಮುತ್ತಿನಂತಾ ಗಂಡನ ಬಿಟ್ಟ
ಎದ್ದು ಬಂದೆನ ಬುದ್ದಿ ಸಾಲದೆ
ಸಣ್ಣನಾಮದ್ಹುಡಗಾ
ಎದ್ದು ಬಂದೆನ ಬುದ್ದಿಸಾಲದೆ || ೫ ||

## ೧ ತೋಳಬಂದಿ ಗೆಳತಿ

ಸಣ್ಣ ಕಾಲುಂಗುರ ಬಣ್ಣದ ಸೀರಿ
ತೋಳಬಂದಿ ಗೆಳತಿ
ಮುಂಗೈ ರೇಸಿಮಿ ದುಂಡಬಳಿಯ ಕೈ
ಹೊಗವಾಗದೊ ನಡೀತಿ ||೧||

ಸಾಲಮನಿಯೊಳು ಅಡಿಗಿ ಮಾಡಲಿಕ್ಕೆ
ನಾನೊಳೆ ಬಲವಂತೆ
ಅವ್ವಾ ನೋಡೆ
ನಾನೊಳೆ ಸೆಮರಂತೆ
ಮುಂಜಾನೆದ್ದು ಒಲಿ ಹೊತ್ತಿಟ್ಟರ
ಮದ್ಯಾನ್ಹ ಹತ್ತಲಿಲ್ಲ ||೨||

ಅತ್ತಿ ಮಾವರ ಕೂತ ಬಿಸ್ಲಾಕ ಕುಂತರ
ನಾ ಬಲು ಬಲವಂತಿ
ಅವ್ವಾ ನೋಡೆ
ನಾ ಬಲು ಸೆಮರಂತೆ
ಕಲ್ಲೊಳಗಿನ ಹಿಟ್ಟು ಕೆಳಗಿ ಬೀಳದಾಂಗ
ನಾ ಬಲು ಜಾಡಸಾಕೆ ||೩||

ಕುಂಬಾರ ಮನಿಗ್ಹೋಗಿ ಕೊಡಾ ತಂದಿನೆವ್ವ
ತಳಾ ನೋಡಲಿಲ್ಲ
ಅವ್ವಾ ನೋಡೆ
ಕೊಡಾ ನೋಡಲಿಲ್ಲ
ಹಳ್ಳದ ನೀರು ತುಂಬಿಹೊತ್ತರೆ
ಒಂದ್ಹನಿ ಉಳಿಲಿಲ್ಲ ||೪||

ವರಾ ಕೊಟ್ಟು ಎರಡು ಮರಾ ತಂದಿನೆವ್ವ
ತಳಾ ನೋಡಲಿಲ್ಲ
ಅವ್ವಾ ನೋಡೆ
ಮರಾ ನೋಡಲಿಲ್ಲ
ಸೇರ ಜ್ವಾಳಾ ಹಸಮಾಡಾಕ ಕುಂತರ
ಒಂದ ಕಾಳ ಉಳಿಲಿಲ್ಲ ||೫||

ಜಗಳ ಕೇಡರೆ ಜೀವ್ ಜಲ್ಲಂತೈತಿ
ನಾಬಲು ಹೆದರಾಕಿ
ಲವ್ವಾ ನೋಡೆ
ನಾ ಒಲು ಹೆದರಾಕಿ
ಅರತು ಮರತು ಮೈಮೇಲಿ ಬಿದ್ದರ
ತಡ್ಲ ಬೀಜಾ ಹರಿಯಾಕಿ ||೬||

## ೨ ಸೀರೆ ಉಡೋದು ಮರತಾಳಲ್ಲಾ

ಮೋಡ ಹೆಂಗಸಳ ಮಜಾ ಕೇಳರಿ
ಗಂಡಗ ಅನತಾಳಪ್ಪಾ
ಕುಪ್ಪಸದ ಕಣ ತಂದು ಕೊಡೋತನಾ
ಅಡಿಗಿ ಮಾಡಿ ನಾ ನೀಡೋದಿಲ್ಲಾ ||೧||

ಮೂರಂಬೊ ದಿವಸದೊಳು
ಕುಬ್ಬಸದ ಕಣಾ ತಂದು
ಮಡಿದಿ ಕೈಯ್ಯಾಗ ಕೊಟ್ಟಾನಲ್ಲಾ
ಗಂಡ ಮಡದಿ ಕೈಯ್ಯಾಗ ಕೊಟ್ಟಾನಲ್ಲಾ ||೨||

ಸುಲಪಟ್ಟನ ಮನಿಗ್ಹೋಗಿ
ಸೊಗಸಾಗಿ ಅಳತಿಕೊಟ್ಟು
ಕುಬ್ಬಸ ಹೊಲಿಸಿಕೊಂಡು ಬಂದಾಳಲ್ಲಾ
ಹೆಂಡತಿ ಕುಬ್ಬಸ ಹೊಲಿಸಿಕೊಂಡು ಬಂದಾಳಲ್ಲಾ ||೩||

ಒರೇ ಬತ್ತಲ ಬಚ್ಚಲಮೊಳಗ ಕುಂತಾಳಲ್ಲಾ
ಜನಕ ಬೆಳಕ ಮಾಡಿಕೊಂಡು
ಕುಬಸವ ತೊಟ್ಟುಕೊಂಡು
ಸೀರೆ ಉಡೋದು ಮರತಾಳಲ್ಲಾ ||೪||

ಹೊರಬಿದ್ದ ಒರುವಾಗ ನೆರಮನಿ ಮುದಕಿ
ಕೇಳತಾಳ ಎಲ್ಲಿಟ್ಟೀ ತಂಗಿ ಶ್ಯಾಲಾ
ಶ್ಯಾಲಪಾಲ ಅಲ್ಲಮ್ಮಾ ಕಾತ್ರಿ ಬಣ್ಣದ ಮಾಲು
ಎಂದೆಂದೂ ಬಣ್ಣ ಹೋಗೋದಿಲ್ಲಾ ||೫||

ದಡಬಿದ್ದು ಬರುವಾಗ ಚೌಡಿ ಮುಂದೆ ಕುಂತಿರೋ
ಗೌಡ ಶಾಂಬವ ಎಲ್ಲಾರು
ಸಿಟ್ಟಿಗೆದ್ದು ತಾಳ್ಯಾರದ ಕೆಳಗ ಬಂದು
ಹೇಳತಾರ ಬಾಳಗೇಡಿ ನಡಿ ಆಕಡಿ ॥ ೬ ॥

ಬಾಳಗೇಡಿ ಅಲ್ಲ ತಮ್ಮ
ಬಾಳ ಗಂಟ್ಟಿ ಮುಚ್ಚೀತಿದಕ
ಕಳ್ಳಗಿಳ್ಳತನಾ ಮಾಡಿ
ನಾನು ತಂದಗಿಂದಿಲ್ಲಾ ॥ ೭ ॥

ದೂರದಿಂದ ಮಸೀದಿ ಮುಂದ ಸಾಗಿಬಂದಾಳಣ್ಣಾ
ಮುಲ್ಲಾ ಕೇಳತಾನೆ ಕ್ಯಾ ಅಡ್ನಾಡಿ
ಸಾಡಿಗೇಡಿ ಉಡಬೇಕ
ನೀನು ಈಗ ಮದಲಾ ॥ ೮ ॥

ಚಾಡಿಪಾಡಿ ಏನ ಇಲ್ಲಾ
ನನ್ನ ಕಡಿಗಿ ನೋಡಬ್ಯಾಡಾ
ಹಾಕಲಾಡಿ ನೋಡ್ ದೇವರ ಕಡಿ
ಮಸೀದಿ ಮುಲ್ಲಾ ॥ ೯ ॥

ಮನಿಗಿ ಬಂದು ನೀರಗಿಬಡದು
ಅವಳು ಕುಂತಕೋವಾಗ
ಎಲ್ಲಾರು ನೋಡಿ ಬಿಟ್ರು
ನನ್ನ ಮಾನಾ ॥ ೧೦ ॥

## ೩. ನನ್ನಂತಾಕೆಗೆ ವಟವಟ ಅಂತಾರ

ಮೂರು ಪಡಿ ಜ್ವಾಳಾ ಕೊಟ್ಟ
ಪಡಗಾ ತಂದೆನವ್ವಾ
ತಳದಾಗ ತೂತಿಲ್ಲ
ಇಪ್ಪತ್ತೆಂಟು ಕೊಡಾ ನೀರು ಹಾಕಿದರ
ತಳಧಾಗ ನೀರಿಲ್ಲ

ಅಂಗಡಿಗೆ ಹೋಗಿ
ಸೇರ ಜ್ವಾಳಾ ತಂದು
ಕಲ್ಲಾಗ ಮುಕ್ಕ್ಯಾಕಿ
ದೂರ ನಿಂತಿಗಂಡ
ನಾ ಬಲು ತಿರುವಾಕಿ

ಸಿಟ್ಟ ಮಾಡಿ ಸುಟ್ಟೆನವ್ವಾ
ಮೂರುವರಿ ಕಟಿಗಿ
ಒಂದು ರೊಟ್ಟಿ ಸುಪಲಿಲ್ಲ
ನನ್ನಂತಾಕಿಗೆ ವಟಾವಟಾ ಅಂತಾರ
ಅತ್ತಿ ಗಂಡನವರಾ

## ೪ ತತ್ರಿಬಿತ್ರಿ ಹೆಣ್ಣೆ

ತತ್ರಿಬಿತ್ರಿ ಹೆಣ್ಣೆ
ನಿನ್ನ ತತ್ರಣ್ಯಾವಲ್ಲಿಟ್ಟೆ
ಬೆಕ್ಕಗಿಕ್ಕ ಉಳಿಸ್ಯಾವಂದು
ಎತ್ತಿನ ಕಾಲಾಗ ಇಟ್ಟೆ ||೧||

ದೀಬರ ದಿಂಡಿ ಹೆಣ್ಣೆ
ನಿನ್ನ ದೀಪ ಯಾವಲ್ಲಿಟ್ಟೆ
ಗಾಳಿಗೀಳಿ ಬೀಸ್ಯಾವಂದು
ಗುಂಬಿ ಮ್ಯಾಗ ಇಟ್ಟೆ ||೨||

ಬಂಗಾಳ ದೇಸದ ಹೆಣ್ಣೆ
ನಿನ್ನ ಗಂಗಾಳ್ಯಾವಲ್ಲಿಟ್ಟೆ
ಕಳ್ಳರಗಿಳ್ಳರ ಓದಾರುಂದು
ಕಳ್ಳಿ ಸಾಲಾಗಿಟ್ಟೆ ||೩||

ಮುರಕಲಾಡಿ ಹೆಣ್ಣೆ
ನೀ ಹೊರಕಡಿಗೆಲ್ಲಿ ಕುಂತೆ
ಮುಂದಿಗಿಂದಿ ನೋಡ್ಯಾರೆಂದು
ದೇವರ ಕ್ವಾಣ್ಯಾಗ ಕುಂತೆ ||೪||

## ೫ ನನ್ನ ಜಲ್ಮ ಹೋಗಲಿಲ್ಲತ್ತಿಗಿ

ಸಾಯ್ಲೀನು ಅತ್ತಿಗಿ
ಸಬಾಡಲೇನು ಅತ್ತಿಗಿ
ಕಣಿಕೇರಿ ನಾಯಿ ಬಂದು ಬಾವೀ ಬೀಳತತ್ತಿಗಿ ॥ ೧ ॥

ಮುಚ್ಚಳದಾಗೆ ನೀರ ಹಾಕಿ
ಮುಣ ಮುಣಗಿ ನಾ ಎದ್ರೆ
ಹಂಗಾದರೆ ನನ್ನ ಜಲ್ಮ ಹೋಗಲಿಲ್ಲತ್ತಿಗಿ
ಹಿಂಗಾದ್ರೆ ನನ್ನ ಜಲ್ಮ ಹೋಗಲಿಲ್ಲತ್ತಿಗಿ ॥ ೨ ॥

ಕಂಬಕ್ಕೆ ಉರಲ ಹಾಕಿ
ಇಂಬಾಗಿ ನಿಂತರ
ಹಿಂಗಾದ್ರೆ ನನ್ನ ಜಲ್ಮ ಹೋಗಲಿಲ್ಲತ್ತಿಗಿ
ಹಂಗಾದ್ರೆ ನನ್ನ ಜಲ್ಮ ಹೋಗಲಿಲ್ಲತ್ತಿಗಿ ॥ ೩ ॥

ಹಂಚೀಯ ತಾಗೊಂಡು
ಅಂಗಂಗಳ್ಳ ಇರಕೊಟ್ರೆ
ಹಂಗಾದ್ರೆ ನನ್ನ ಜಲ್ಮ ಹೋಗಲಿಲ್ಲತ್ತಿಗಿ
ಹಿಂಗಾದ್ರೆ ನನ್ನ ಜಲ್ಮ ಹೋಗಲಿಲ್ಲತ್ತಿಗಿ ॥ ೪ ॥

## ೬ ಮಲಿ ಬಿಟಗೊಂಡೆ

ಬಂಡೆ ರಂಗನ ತೇರ್ ಏನು ಚಂದೆ
ಹುಡಿಗಿ ಪಾಸಂದೆ
ಸವಾಲ್ ಹೇಳತೀನಿ ನಾನೊಂದೆ
ಗೆಳತಿ ಗೆಣೆಯಾಂದೆ ॥ ೧ ॥

ಸೀರಿ ತಂದೇನಿ ನಾರಿ ಕೊಂಡುಕೊಂಡೆ
ಕುಂತು ನೇಸಿಗೊಂಡೆ
ಉಟಗೋ ಅಂದ್ರ ಹೋಗತಾಳೆ
ಸೆಟಗೊಂಡೆ
ಕುಂಡಿ ಬಿಟಗೊಂಡೆ ॥ ೨ ॥

ಕುಬುಸಾ ತಂದೇನಿ ನಾರಿ ಕೊಂಡುಕೊಂಡೆ
ಕುಂತು ನೇಸಿಗೊಂಡೆ
ತೊಟಗೋ ಅಂದ್ರ ಹೋಗತಾಳೆ
ಸೆಟಗೊಂಡೆ
ಮಲಿ ಬಿಟಗೋಂಡೆ || ೩ ||

## ೭ ಪಕೀರ್ ಸ್ವಾಮಿ

ದೀರ ಚಿಕ್ಕ ಕೈಯಾಗ
ಗಸೇಟಾತ್ರಿ ಊರಾಗ
ಒಡೀಬಾಡ್ರಿ ಅಣ್ಣಾಗ
ಊರನಲ್ಲಿ ಜ್ಯಾತರಿಗೆ
ಜೈತರಾಮು ಮಾಡಿದ ಕ್ವಾಬ್ಬರ
ಡಬನಕಲ್ಲಿಗೆ ಜರತಾರ

ಊರೊಳಗಿನ ಜನರು
ನೀರು ತುಂಬ ತಾರೊಂದು ಬಾವಿಯೊಳಗಿರಿ
ಕಣ್ಣಾಗಿ ಚಾಯದ ಚಿನ್ನದ ಹೆಣ್ಣಾ
ಹೊರುಟಾಳ ನೀರಿಗಿ
ದೀನ್ ಪಕೀರಸ್ವಾಮಿ
ನೋಡುತ ನಿಂತಾನ್
ನದರ್ ಆಕಿ ವ್ಯಾಲಿ

"ಹೊನ್ನ ಬಂಗಾರ ಕೊಡತೀನ್ಹೇಳೆ
ಏನ ಹೇಳತಿ ಹೇಳೆ"
"ನಿನ್ನೇನ ಸುಡಲ್ಯೋ ಸನ್ಯಾಸಿ ಮೂಳಾ
ಸುಮ್ಮನ್ಹೋಗೊ ಘನಿಗ್ವ್ಯಾರ"
ಅಂಗು ಅಂದಾಗ ಪಕೀರ್‌ಸ್ವಾಮಿ
ಭೂಮಿ ವ್ಯಾಲ ಬಿದ್ದ ಉಳ್ಳ್ಯಾಡತಾನ್ರಿ
ಹೆಣ್ಣು ಗಂಡು ನಿಂತ ನೋಡತಾರ
ಏನ ಆದಿತ್ರಿ ಇವಗ

ಪಟ್ಟೇರಕ್ಕ ಪಟ್ಟೇರಕ್ಕ
ಎತ್ತಿ ಕೊಡ್ರಿ ನೀವು ಒಕ್ಕಲರು ಗತಿಮಾಡಿ
ದೀನ ಪಕೀರಸ್ವಾಮಿ
ಸೂಳಿಗೇರಿಗ್ಹೋಗುವದು ನಿಮ್ಮಿಷ್ಟ

ಕಾಲಾಗ ಚಪಲಿ ಕೈಯಾಗ ಬೆತ್ತ
ಕುತ್ತಾನಂಗಿ ತೊಟ್ಟರಿ
ಗಡಗಡ ಹೋಗಿ
ಸೂಳೆ ಮಂಚದ ಮಾಲ್ ಎರಡು ಪಾದವಿಟ್ಟ

ಗಡಾನ ಹೋಗರಿ
ತಡಾಮಾಡಬ್ಯಾಡ್ರಿ
ಬಂದಿತ ನಿಮಗ ಕಷ್ಟ
ಫಕೀರ್ ಸ್ವಾಮಿ ಎಲ್ಲಾ ತಾಳಿ ಕೇಳಲಿಲ್ಲ
ಹಿಡದ ಬಿಟ್ಟ ಗಟ್ಟಿ

ಗುತ್ತಿಗಿ ಗೆಣಿಯಾ
ಕತ್ತಲು ಮನಿಯಾಗ
ಹಿಡಕೊಂಡ ಜುಟ್ಟಾ
ಕಡ್ಡಿ ಕೊರದ
ದೀಪಾಮುಡಿಸಿ
ಗಡ್ಡಾ ಮೀಸಿ ಸುಟ್ಟಾ

ಗಡಾನ ಹೋಗ್ರಿ
ತಡಾ ಮಾಡಬ್ಯಾಡ್ರಿ
ಬಂದಿತ ನಿಮಗ ಕಷ್ಟ

### ೮ ಸ್ವಾಮಿಗಿ ಬಸಿಯೋದು ಕಂಡೆ

ಚಪ್ಪರ ಮ್ಯಾಗಳ ಹೀರೀಕಾಯಿ
ನಿಗರಿ ನಿಗರಿ ಕೊಯ್ದರ
ಮೋಟ ಮುದನಾಳ ಹುಂಚೀಕಾಯಿ
ಬಾಯಿ ಬಿಟ್ಟೇತೆ

ಸ್ಯಾವಿಗಿ ಬಸಿಯೋದು ಕಂಡೆ
ಬಾನಾ ಬಸಿಯೋದು ಕಂಡೆ
ನೆಲ್ವಿನ್ ಮ್ಯಾಲಳ ತುಪ್ಪದ ಕುಡಿಕಿ
ದಪ್ಪುನ ಬಿದ್ದೀತಿ

ಕಣ್ಣಪ್ಪ ನೋಡತಿದ್ದ
ಕೈಯ್ಯಪ್ಪ ಎಳೀತಿದ್ದ
ಬಾಯಪ್ಪಗುಳುಂ ಗುಳುಂ ನುಂಗತಿದ್ದನೆ

ಬಾಯಪ್ಪ ಗುಳುಂಗುಳುಂ ನುಂಗೋ ಅಷ್ಟೊತ್ತಿಗೆ
ಮುಕಳಿಪ್ಪ ಟಿಸ್‌ಪಿಸ್ ಅಂತಿದ್ದನೆ
ಮುಕಳಿಪ್ಪ ಟಿಸ್‌ಪಿಸ್ ಅನ್ನೋ ಅಷ್ಟೊತ್ತಿಗೆ
ತಿಪ್ಪೆಪ್ಪ ಕೈಬೀಸಿ ಕರಿಯತಿದ್ದನೆ
ತಿಪ್ಪೆಪ್ಪ ಕೈಬೀಸಿ ಕರಿಯೊ ಅಷ್ಟೊತ್ತಿಗೆ
ಕಾಲಪ್ಪ ಹಾರಿಗ್ಯಾಲ ಬೀಳತಿದ್ದನೆ

## ೯ ಒಬ್ಬನ್ನ ಕರಕೊಂಡು ಒಳಗಿದ್ದೆ

ಮಲ್ಲಿಗೆ ಮಾತನಾಡ
ಸ್ಯಾವಂತಿಗಿ ಹೂವೇನ ಮಾತನಾಡ ||

"ಒಬ್ಬನ್ನ ಕಟ್ಟಿದ್ದೆ ಒಬ್ಬನ್ನ ಬಿಟ್ಟಿದ್ದೆ
ಒಬ್ಬನ್ನ ಕರಕೊಂಡು ಒಳಗಿದ್ದೆ"
"ಯಾವನ್ನ ಕಟ್ಟಿದ್ದೆ ಯಾವನ್ನ ಬಿಟ್ಟಿದ್ದೆ
ಯಾವನ್ನ ಕರಕೊಂಡು ಒಳಗಿದ್ದೆ"
"ಆಕಳ ಕಟ್ಟಿದ್ದೆ ಕರುವನ್ನು ಬಿಟ್ಟಿದ್ದೆ
ಹಾಲಸ್ವಾಮಿ ಕರಕೊಂಡ ಒಳಗಿದ್ದೆ" || ೧ ||

"ಒಬ್ಬನ್ನ ಕುಂದ್ರಿಸಿದ್ದೆ ಒಬ್ಬನ್ನ ನಿಂದ್ರಿಸಿದ್ದೆ
ಒಬ್ಬನ್ನ ಹಿಡಕೊಂಡು ಜಗ್ಗತಿದ್ದೆ"
"ಯಾವನ್ನ ಕುಂದ್ರಿಸಿದ್ದಿ ಯಾವನ್ನ ನಿಂದ್ರಿಸಿದ್ದಿ
ಯಾವನ್ನ ಹಿಡಕೊಂಡ ಜಗ್ಗತಿದ್ದೆ"

"ಗಡಗೀಯ ಕುಂಡ್ರಿಸಿದ್ದೆ ಕಡಗೋಲು ನಿಂದ್ರಿಸಿದ್ದೆ
ಹಗ್ಗವ ಹಿಡಕೊಂಡು ಜಗ್ಗತಿದ್ದೆ" ॥ ೨ ॥

## ೧೦ ತಿಗಳ ತಿಂದsತಿ

ಯಾಕೊ ಎಜ್ಜ ನಿನ್ನ ತೆಲಿ
ತಿಗsಳ ತಿಂದsತಿ
ಅವನ್ನೇನು ಗುದಗಿ ಹೇಳ್ತಿ
ಇವ್ದಂಗ್ಯೆತಿ ॥ ೧ ॥

ಮುಚ್ಚೀದ್ ಕೋಳಿಹಂಗೆ
ಯಾಕೆ ಕೂಗತೀ
ಪುಟ್ಟಿ ಎತ್ತಿ ಕೈಬಿಟ್ರೆ
ತಟ್ಟಿ ಹೇಲ್ತೀ ॥ ೨ ॥

## ೧ ಅಡ್ಡಗೋಡಿ ಬಸುರಾಗಿ

ನಾರಿಗೆ ನಾರಿ
ಮದನ ಸುಂದರಿ

ಅಡ್ಡಗೋಡಿ ಬಸುರಾಗಿ
ಕಸಬರಗಿ ಓಡ್ಯಾಡಿ
ಗುಂಡಕಲ್ಲಿಗೆ ಬಂತೂ ಉಳ್ಳಾಕ್ಯಟ ನಾರಿ । ನಾರಿಗೆ....

ಗುಂಡಕಲ್ಲಿಗೆ ಬಂತವ್ವ ಉಳ್ಳಾಕ್ಯಟ
ಬೀಸೆಕಲ್ಲಿಗೆ ಬಂತು ತಿರುಗ್ಯಾಟ ನಾರಿ । ನಾರಿಗೆ....

ಬೀಸೆಕಲ್ಲಿಗೆ ಬಂತವ್ವ ತಿರುಗ್ಯಾಟ
ಕಸಬರಿಗೆ ಬಂತು ತೆವಳ್ಯಾಟ ನಾರಿ । ನಾರಿಗೆ....

## ೨ ಹಾವ ಸಿಂಬೆಯುಮಾಡಿ

ತಳವಾರನ್ಹೆಣತಿ ನಡುಗೇರಿ ಸುಕಜಾಣಿ । ಕೋಲು ಕೋಲೆ
ಹಾವ ಸಿಂಬೆಯ ಮಾಡಿ ಹೊತ್ತಾಳೆ ಕೊಡನಾ । " ॥೧॥

ಹಾವ ಸಿಂಬೆಯ ಮಾಡಿ ಹೊತ್ತಾಳೆ ಕೊಡನಾ । ಕೋಲುಕೋಲೆ
ಜಲವಿಲ್ದ ಬಾವ್ಯಾಗ ತುಂಬ್ಯಾಳೆ ಕೊಡನಾ । " ॥೨॥

ಜಲವಿಲ್ದ ಬಾವ್ಯಾಗ ತುಂಬ್ಯಾಳೆ ಕೊಡನಾ । ಕೋಲುಕೋಲೆ
ಬೂಮಿ ಇಲ್ಲದಲ್ಲಿ ಇಳಿವ್ಯಾಳೆ ಕೊಡನಾ । " ॥೩॥

ಬೂಮಿ ಇಲ್ಲದಲ್ಲಿ ಇಳಿವ್ಯಾಳೆ ಕೊಡನಾ । ಕೋಲುಕೋಲೆ
ಬಾಯಿಲ್ಲದ ಮಿಕವು ಮುಟ್ಟೀತಿ ಕೊಡನಾ । " ॥೪॥

ಬಾಯಿಲ್ಲದ ಮಿಕವು ಮುಟ್ಟೀತಿ ಕೊಡನಾ । ಕೋಲುಕೋಲೆ
ಕಣ್ಣಿಲ್ಲದ ಜಾಣ ನೋಡ್ಯಾನೆ ಮಿಕನಾ । " ॥೫॥

ಕಣ್ಣಿಲ್ಲದ ಜಾಣ ನೋಡ್ಯಾನೆ ಮಿಕನಾ | ಕೋಲುಕೋಲೆ
ಕಾಲಿಲ್ಲದ ಜಾಣ ತಿರುವ್ಯಾನೆ ಮಿಕನಾ | " ||೬||

ಕಾಲಿಲ್ಲದ ಜಾಣ ತಿರುವ್ಯಾನೆ ಮಿಕನಾ | ಕೋಲುಕೋಲೆ
ಕೈಯ್ಯ ಇಲ್ಲದ ಜಾಣ ಹೊಡೆದಾನೆ ಮಿಕನಾ | " || ೭ ||

ಕೈಯ್ಯ ಇಲ್ಲದ ಜಾಣ ಹೊಡೆದಾನೆ ಮಿಕನಾ | ಕೋಲುಕೋಲೆ
ಬುಜವು ಇಲ್ಲದ ಜಾಣ ಹೊತ್ತ್ಯಾನೆ ಮಿಕನಾ | " ||೮ ||

ಬುಜವು ಇಲ್ಲದ ಜಾಣ ಹೊತ್ತ್ಯಾನೆ ಮಿಕನಾ| ಕೋಲು ಕೋಲೆ
ಅಲಗಿಲ್ದ ಚೂರೀಲಿ ಕೊಯ್ದಾರೆ ಮಿಕನಾ | " || ೯ ||

ಅಲಗಿಲ್ದ ಚೂರೀಲಿ ಕೊಯ್ದಾರೆ ಮಿಕನಾ | ಕೋಲು ಕೋಲೆ
ತಳ ಇಲ್ದ ಗಡಿಗ್ಯಾಗ ಕುಟ್ಯ್ಯಾರೆ ಮಿಕನಾ | " ||೧೦||

ತಳ ಇಲ್ದ ಗಡಿಗ್ಯಾಗ ಕುಟ್ಯ್ಯಾರೆ ಮಿಕನಾ | ಕೋಲು ಕೋಲೆ
ಅಂಗಳಿಲ್ಲ ಜಾಣ ನುಂಗ್ಯಾನೆ ಮಿಕನಾ | " || ೧೧ ||

ಅಂಗಳಿಲ್ಲದ ಜಾಣ ನುಂಗ್ಯಾನೆ ಮಿಕನಾ | ಕೋಲು ಕೋಲೆ
ಇದನ್ನ ಒಡದ ಹೇಳಿದವರಿಗೆ ಅಚ್ಚೇರಿನ ಕಡಗ | " || ೧೨ ||

## ೩. ತೊಂಬಾಕ ಚಿಲಿಮಿ ತಾರೆ

ತೊಂಬಾಕs ಚಿಲಿಮಿ ತಾರೆ | ನಿನ್ನಕ್ಕನ್ಹಡಾ
ತೊಂಬಾಕs ಚಿಲಿಮಿ ತಾರೆ |

ತೊಂಬಾಕ್ ಗಿಂಬಾಕ್ ತಯ್ಯಾರಾತು
ಅದಕ ಚಿಲಿಮಿ ಬೇಕಾತು
ಚಿಲಿಮಿಗೆ ಹೋದ ಹುಡಗಾ ಚಿಲಗೊಡದಾಗದಾಗಂತೆ
ಬಂದನಂತೆ ತಂದನಂತೆ
ಹಾಕಿದನಂತೆ ಮಿದ್ದಿದನಂತೆ | ತೊಂಬಾಕs || ೧ ||

ಚಿಲಿಮಿ ಗಿಲಿಮಿ ತಯ್ಯಾರಾತು
ಅದಕ ತೊಂಬಾಕ್ ಬೇಕಾತು
ತೊಂಬಾಕಕ್ಕ ಹೋದ ಹುಡಗಾ ತಂಬ್ರಳ್ಯ್ಯಾಗದಾನಂತೆ

ಬಂದನಂತೆ ತಂದನಂತೆ
ಹಾಕಿದನಂತೆ ಮಿದ್ದಿದನಂತೆ | ತೊಂಬಾಕs ॥ ೨ ॥

ತೊಂಬಾಕ್ ಗಿಂಬಾಕ್ ತೈಯ್ಯಾರಾತು
ಅದಕ ಬೆಂಕಿ ಬೇಕಾತು
ಬೆಂಕಿಗೆ ಹೋದ ಹುಡಗಾ ಬಂಕಾಪೂರದಾಗದಾನಂತೆ
ಬಂದನಂತೆ ತಂದನಂತೆ
ಹಾಕಿದನಂತೆ ಮಿದ್ದಿದನಂತೆ | ತೊಂಬಾಕs ॥ ೩ ॥

ಬೆಂಕಿಗಿಂಕಿ ತಯ್ಯಾರಾತು
ಅದಕ ಅರಿವಿ ಬೇಕಾತು
ಅರವಿಗೆ ಹೋದ ಹುಡಗಾ ಹರಪನಳ್ಳ್ಯಾಗದಾನಂತೆ
ಬಂದನಂತೆ ತಂದನಂತೆ
ಹಾಕಿದನಂತೆ ಮಿದ್ದಿದನಂತೆ | ತೊಂಬಾಕs ॥ ೪ ॥

ಅರವಿ ಗಿರವಿ ತಯ್ಯಾರಾತು
ಅದಕೆ ಮಿದ್ದವರು ಬೇಕಾತು
ಮಿದ್ದಾಕ ಹೋದ ಹುಡಗಾ ಮುದ್ದಾಪೂರದಾಗದಾನಂತೆ
ಬಂದನಂತೆ ತಂದನಂತೆ
ಹಾಕಿದನಂತೆ ಮಿದ್ದಿದನಂತೆ | ತೊಂಬಾಕs ॥ ೫ ॥

ಮಿದ್ದೋದು ಗಿದ್ದೋದು ತಯ್ಯಾರಾತು
ಅದಕೆ ಎಳಿಯರು ಬೇಕಾತು
ಎಳಿಯಾಕೆ ಹೋದ ಹುಡಗಾ ಎಡತ್ನಳ್ಳ್ಯಾಗದಾನಂತೆ
ಬಂದನಂತೆ ತಂದನಂತೆ
ಹಾಕಿದನಂತೆ ಸೇದಿದನಂತೆ | ತೊಂಬಾಕs ॥ ೬ ॥

## ೪ ನಸುಪುಡಿ ಗಿರಾಕಿ

ವಸಂತಜಾಕೆ | ನಸುಪುಡಿ ಗಿರಾಕಿ ॥

ಆ ಕಡೆ ಮನ್ಯಾಕೆ ಈ ಕಡೆ ಬರಾಕೆ
ಕಟ್ಟೆಮ್ಯಾಲ ಕುಂಪ್ರನ್ನಾಕೆ ॥ ೧ ॥

ಕಟ್ಟಿಮ್ಯಾಲ ಕುಂಡ್ರಸ್ನಾಕೆ
ನಸುಪುಡಿ ವರಸನ್ನಾಕೆ || ೨ ||

ನಸಪುಡಿ ವರಸನ್ನಾಕೆ
ಹಲ್ಲಿಗ್ಹಾಕಿ ತಿಕ್ಕ ಅನ್ನಾಕೆ || ೩ ||

ಹಲ್ಲಿಗ್ಹಾಕಿ ತಿಕ್ಕ ಅನ್ನಾಕೆ
ಸ್ವಾಟಿಗೆ ಹತ್ತಿದ್ದ ವರಸಾಕೆ || ೪ ||

ಸ್ವಾಟಿಗೆ ಹತ್ತಿದ್ದ ವರಸಾಕೆ
ಎಣ್ಣಿ ಬಾಚಣಿಕಿ ತರಾಕೆ || ೫ ||

ಎಣ್ಣಿ ಬಾಚಣಿಕಿ ತರಾಕೆ
ಬಾಚಿ ಬೈತಲಿ ತಗ್ಯಾಕೆ || ೬ ||

ಬಾಚಿ ಬೈತಲಿ ತಗ್ಯಾಕೆ
ಸೈಕವ ಜಡಿ ಹಾಕಾಕೆ || ೭ ||

ಸೈಕವ ಜಡಿ ಹಾಕಾಕೆ
ಜಡಿಮ್ಯಾಲ್ ಹೂವ ಮುಡಿಯಾಕೆ || ೮ ||

ಜಡಿಮ್ಯಾಲ್ ಹೂವ ಮುಡಿಯಾಕೆ
ಕೊಡವನು ಹೊರಾಕ ತರಾಕೆ || ೯ ||

ಕೊಡವನು ಹೊರಾಕ ತರಾಕೆ
ನೀರಿಗೆ ಹೋಗೋಣು ಬರಾಕೆ || ೧೦ ||

ನೀರಿಗೆ ಹೋಗೋಣು ಬರಾಕೆ
ಬಂದಾನೇನ ನೋಡಾಕೆ || ೧೧ ||

ಬಂದಾನೇನ ನೋಡಾಕೆ
ಒರವಿದ್ರ ರೊಕ್ಕಾ ಕೇಳಾಕೆ || ೧೨ ||

ಒರವಿದ್ರ ರೊಕ್ಕಾ ಕೇಳಾಕೆ
ಡಬ್ಬ್ಯಾಗ್ ನಸುಪುಡಿ ಇಲ್ಲನ್ನಾಕೆ || ೧೩ ||

## ೫ ಎಲ್ಲ ಹೇಳಿಕೊಡುವೆ

ಕುಸಲ ಕುಂಚವ ಬಳ್ಳಿ ಬಿಸಲ ಮಂಚದ ಬಳ್ಳಿ
ಹೌದು ಮಾತಲ್ಲವೇನೆ
ಜಾಣೆ ಹೌದು ಮಾತಲ್ಲವೇನೆ
ನಾ ಬಲ್ಲವನಾದರ ಎಲ್ಲ ಹೇಳಿಕೊಡುವೆ
ನಿನಕಿಂತ ಸಣ್ಣವನು ತಿಳವಂಗೇಳತೆನಿ
ಕೂದಲು ಮತ್ತೆ ಹೌದಲ್ಲವೇನೆ ॥ ೧ ॥

ಹಾದ್ಯಾಗ ಹುಟ್ಟೋದು ಹಾದ್ಯಾಗ ಬೆಳಿಯೋದು
ಹಾದ್ಹಿಡದ ಹೋಗವರ್ನ ಸೆರಗ್ಹಿಡದು ಜಗ್ಗೋದು
ಹೌದು ಮಾತಲ್ಲವೇನೆ
ಜಾಣೆ ಹೌದು ಮಾತಲ್ಲವೇನೆ
ನಾ ಬಲ್ಲವನಾದರ ಎಲ್ಲ ಹೇಳಿ ಕೊಡುವೆ
ಉತ್ರಾಣಿ ಕಡ್ಡೆಲ್ಲವೇನೆ ॥ ೨ ॥

ತಿಪ್ಪ್ಯಾಗ ಹುಟ್ಟೋದು ತಿಪ್ಪ್ಯಾಗ ಬೆಳೆಯೋದು
ತಿಪ್ಪ್ಯಾಗಳ ಕುಪ್ಪ ಸೂರ್ಯಾಡೋದು
ಹೌದು ಮಾತಲ್ಲವೇನೆ
ಜಾಣೆ ಹೌದು ಮಾತಲ್ಲವೇನೆ
ನಾ ಬಲ್ಲವನಾದರ ಎಲ್ಲ ಹೇಳಿಕೊಡುವೆ
ಕೋಳೀಯ ಹುಂಜಲ್ಲವೇನೆ ॥ ೩ ॥

ಕಲ್ಲಾಗ ಹುಟ್ಟೋದು ಕಲ್ಲಾಗ ಬೆಳಿಯೋದು
ಸಣ್ಣ ದೊಡ್ಡವರನ್ನೆಲ್ಲ ಕಣ್ಣೀರ ತರಸೋದು
ಹೌದು ಮಾತಲ್ಲವೇನೆ
ಜಾಣೆ ಹೌದು ಮಾತಲ್ಲವೇನೆ
ನಾ ಬಲ್ಲವನಾದರ ಎಲ್ಲ ಹೇಳಿಕೊಡುವೆ
ಚೇಳೀನ ಮರಿಯಲ್ಲವೇನೆ ॥ ೪ ॥

## ೬ ಕಸ್ತೂರಿಂತಾ ತುಪ್ಪಣ್ಣಾ

ಕೋಲು ಕೋಲಾಟಣ್ಣಾ
ಚಿನ್ನದ ಚಿನಿಕೋಲಣ್ಣಾ | ಕೋಲು ಕೋಲ

ಚಿನ್ನದ ಚಿನಕೋಲಣ್ಣಾ ಗಿಲ್ ಗಿಲ್ ಕುಡಗೋಲಣ್ಣಾ| ಕೋಲು..
ಗಿಲ್ ಗಿಲ್ ಕುಡಗೋಲಿಗೆ ಮಾರ ಮಾರ ಹುಲ್ಲಣ್ಣಾ | ಕೋಲು .
ಮಾರ ಮಾರ ಹುಲ್ಲಿಗೆ ವಜ್ಜರದಂತಾ ಎಮ್ಮ್ಯೈಣ್ಣಾ| ಕೋಲು .
ವಜ್ಜರದಂತಾ ಎಮ್ಮಿಗೆ ಬೋರ್ ಬೋರ್ ಹಾಲಣ್ಣಾ| ಕೋಲು .
ಬೋರ್ ಬೋರ್ ಹಾಲಿಗೆ ಕಾಕುಳ್ಳಿನ ಕೆಂಡಣ್ಣಾ| ಕೋಲು .
ಕಾಕುಳ್ಳಿನ ಕೆಂಡಕೆ ಕರದು ಹಾಲು ಕಾಸಣ್ಣಾ| ಕೋಲು
ಕರವು ಕಾಸಿದ್ಹಾಲಿಗೆ ಒಪ್ಪಿದ ಹಪ್ಪ ಹಾಕಣ್ಣಾ| ಕೋಲು
ಒಪ್ಪಿ ಹಾಕಿದ್ಹೆಪ್ಪಿಗೆ ಚಂದ್ರಸಂತಾ ಮಸರಣ್ಣಾ| ಕೋಲು....
ಚಂದ್ರನಂತಾ ಮಸರಿಗೆ ಡಂಬರಗಣಿ ಮಜ್ಜಿಗೆಣ್ಣಾ | ಕೋಲು .
ಡಂಬರಗಣಿ ಮಜ್ಜಿಗ್ಗೆ ಚೆಂಡಿನಂತಾ ಬೆಣ್ಣ್ಯೆಣ್ಣಾ| ಕೋಲು. ,
ಚೆಂಡಿನಂತಾ ಬೆಣ್ಣಿಗೆ ಕಂಡದಂತಾ ಕಿಚ್ಚಣ್ಣಾ| ಕೋಲು .
ಕೆಂಡದಂತಾ ಕಿಚ್ಚಿಗೆ ಕಸ್ತೂರಿಂತಾ ತುಪ್ಪಣ್ಣಾ| ಕೋಲು ..

## ೭ ಮುಳ್ಳು

ಸಣ್ಣ ಉಸಕಿನ್ಯಾಗ ಬಣ್ಣಿಸಿ ನಡರ
ಸಣ್ಣ ಎಲಿಯ ಬನ್ನೀ ಮುಳ್ಳಾ ||೧||

ದೊಡ್ಡ ಜೀವ ಎಂದು ಮುರದ ನೋಡಿದರ
ಟೊಳ್ಳನತ್ರಿ ಡೊಣ್ಣೀ ಮುಳ್ಳಾ ||೨||

ಆಸ್ವಾಡ ಬಂದರ ಹೇಸಿ ಬಡಿವದು
ಹೇಸಿಮಾರಿ ಈಚಲಮುಳ್ಳಾ ||೩||

ತಟ್ಟಿನ ಸಟ್ಟರ ರಣಗುಟ್ಟುವದು
ಕೆಟ್ಟ ಮಾರಿ ಪಾಪಾಸಿಮುಳ್ಳಾ ||೪||

ಎತ್ತ ನೋಡಿದರ ಕಿತ್ತದಂಗೂರ್ಬದು
ಕತ್ತಿ ಅಂತಾ ಕೌತ್ತಾಳಿ ಮುಳ್ಳಾ ॥ ೫ ॥

ಚಿಗರಿ ಕೋಡಿನಂಗ ನಿಗೆರಿನಿಂತತಿ
ಬೆಟ್ಟದಂತಾ ಬ್ಯಾಲದ ಮುಳ್ಳಾ ॥ ೬ ॥

ಸ್ತ್ರೀಯರ ಕೈಮೇಲಿ ಹಚ್ಚಿ ಹೋಸೋದು
ಬಿಳೀ ಜಾತಿ ಜ್ಞಾಲಿಯ ಮುಳ್ಳಾ ॥ ೭ ॥

## ೮ ಓದಕಲತವರ್ಹೇಳಿರೋ

ಓದಕಲತವರ್ಹೇಳಿರೋ
ಇದರರ್ಥ ಜ್ಞಾನ ತಿಳಿದವರ್ಹೇಳಿರೊ ॥ ೧ ॥

ಹಸುರು ಸೀರಿ ಉಟ್ಟು ಅರವತ್ತು ನೀರಿಗಿ ಹೊಯ್ದು
ಗಂಡರಿಲ್ಲದೆ ಬಾಲಿ ಬಸುರಾಗ್ಯಾಳೆಂಬುವ ॥ ೨ ॥

ಕೈಯ್ಯಿಲ್ಲ ಕಾಲಿಲ್ಲ ಮೂಗು ಬಾಯಿ ಮೊದಲಿಲ್ಲ
ಹೊಟ್ಟೆಗಿ ನಿತ್ಯ ಹಣ್ಣ ತಿಂಬೋದು ॥ ೩ ॥

ಉಪ್ಪರಿಕೆ ಮ್ಯಾಲಿಂದ ದುಪ್ಪಂತ ಬೀಳೋದು
ತೊಟ್ಟಂತ ಕಬ್ಬಸ ಚಟ್ಟಂತ ಹರಿವದು ॥ ೪ ॥

ಹುತ್ತಿನ್ಯಾಗ ಹುಟ್ಟೋದು ಹುತ್ತಿನ್ಯಾಗ ಬೆಳಿಯೋದು
ಸಣ್ಣ ದೊಡ್ಡವರಿಗೆಲ್ಲ ನಾಲೀಗಿ ಚಾಚೋದು ॥ ೫ ॥

ಮಣ್ಣಿನ್ಯಾಗ ಹುಟ್ಟೋದು ಮಣ್ಣಿನ್ಯಾಗ ಬೆಳಿಯೋದು
ಸಣ್ಣ ದೊಡ್ಡವರಿಗೆಲ್ಲ ಕಣ್ಣೀರ ತರಿಸೋದು ॥ ೬ ॥

ಊರಾಗ ಹುಟ್ಟೋದು ಊರಾಗ ಬೆಳಿಯೋದು
ಅಕ್ಕ ತಂಗೇರನೆಲ್ಲ ಹೊತ್ತುಂಟೆ ಎಬ್ಬಿಸೋದು ॥ ೭ ॥

ಹಾದ್ಯಾಗ ಹುಟ್ಟೋದು ಹಾದ್ಯಾಗ ಬೆಳಿಯೋದು
ಹಾದೀಲ್ಹೋಗೋ ಜನರನ್ನೆಲ್ಲ ಸೆರಗ್ಹಿಡದು ಜಗ್ಗೋದು ॥ ೮ ॥

ಊರಾಗ ಹುಟ್ಟೋದು ಊರಾಗ ಬೆಳಿಯೋದು
ಸಣ್ಣ ದೊಡ್ಡೋರನ್ನೆಲ್ಲ ಶಿವಶರಣ ಮಾಡೋದು* || ೯ ||

## ೯ ಗೆಣಿಯೂ ಇಳದು ಬಂದಾನಲ್ಲಾ

ಮೂಡಲ್ ದೇಶದಿಂದ ಹೊಳಿಯು ಬಂದಿತಲ್ಲಾ
ಒಂದು ಗಡ್ಡಿ ಬಿದ್ದಿತಲ್ಲಾ
ತೆಂಗಿನಮರ ಹುಟ್ಟಿತಲ್ಲಾ
ಮರಾಹುಟ್ಟಿ ಹನ್ನೆರಡುವರುಷಕ್ಕ ಕಾಯಿ ಬಿಟ್ಟಿತಲ್ಲಾ
ಕಾಯಿ ಭಾರವ ತಾಳಲಾರದ ಮರ
ಭೂಮಿಗೆ ಎರಗಿತಲ್ಲಾ || ೧

ಮೂಡಲ್ ದೇಶದ ಮುಸಲ್ ಪೋರ ಬಂದು
ಮರಾ ನೋಡ್ಯಾನಲ್ಲಾ
ಮುನ್ನೂರು ಕಾಯಿ ಕಾಯಿ ಕೊಯ್ದಾನಲ್ಲಾ
ಕಾಯಿ ಬಾರವು ಹಗುರು ಆದವ್ಯಾಲ
ಗಗನಕ್ಕ ಹೋದಿತಲ್ಲಾ
ಮರಾ ಗಗನಕ ಹೋದಿತಲ್ಲಾ

ಗೆಣಿಯಾಗ ಇಳಿಯ ತ್ರಾಣ ಇಲ್ಲಾ
ನಡುವಿನಲ್ಲಿ ಒಂದು ಚಾಕು ತಗೊಂಡು
ತೊಡಿಯ ಕೊಯ್ದಾನಲ್ಲಾ
ತಲಿ ಮ್ಯಾಲಿನ ಪೇಟ ತಗದು
ಪೇಟಕ ರೈತ ಹಚ್ಯಾನಲ್ಲಾ
ತೆಂಗಿನ ಸುಳಿಗೆ ನೆಗಿಸ್ಯಾನಲ್ಲಾ || ೨

ದೇಶದ ಮ್ಯಾಗಳ ಹದ್ದು ತಾಗಿ ಬಂದು
ಮರಕ ಕುಂತಾವಲ್ಲಾ

೧—*೨—ಕ್ಯಾದಿಗಿ ೩—ರಾಟ ೪—ಹುಣಿಸಿಹಣ್ಣು
೫—ಸರ್ಪ ೬—ಚೇಳು ೭—ಕೋಳಿ
೮—ಉತ್ರಾಣಿಕಡ್ಡಿ ೯—ಹಂಪಿಯತೇರು

ಹದ್ದಿನ ಭಾರವು ತಾಳಲಾರದೆ ಮರ
ಭೂಮಿಗೆರಗಿತಲ್ಲಾ
ಗೆಣೆಯಾ ಇಳದು ಬಂದಾನಲ್ಲಾ
ಮುಸ್ನೂರ ಕಾಯಿ ಹೊತ್ತಾನಲ್ಲಾ || ೪ ||

## ೧೦ ಯಾವೂರಂತ ಕೇಳಿದಳಪ್ಪ

ಮಡ್ಡ್ಯಾಳ ಸಂತಿಗೆ ಹೋಗಿದ್ದೆನಪ್ಪ
ತಿರಿಗ್ಯಾಡಿ ನಾನು ಬರತಿದ್ದೆನಪ್ಪ
ಯಾವೂರಂತ ಕೇಳಿದಳಪ್ಪ
ದೂರಬಾರದ ದುರಗದ ಸೀಮಿ
ಊರ ಮುಂದಲ ಬದನೀಕಾಯಿ
ತ್ವಾಟದಾಗಳ ಊಳಾ ಗಡ್ಡಿ

## ೧೧ ಹೆಸರಿಟ್ಟಾರ ಕುಮಾರಸ್ವಾಮಿನಾ

ಹೈಸೂರಾ ಸಮರಾ
ರಾವಣಾಸೂರಾ ಬಲಿ ಬಾದ್ದೂರಾ ||

ಮನಿಯು ಕಟ್ಟಿಸ್ಯಾಳ್ರಿ ಜಂಗ ಸರಪಣಿ
ಕಂಬ ಹದಿನಾರಾ
ಮನೆ ಮುಂದ ಕಟ್ಟಿಸ್ಯಾಳ್ರಿ ಮಾಲಿನ ಮಂಟಪವ
ಮೇಲ್ ಜಂತಿ ಹಾಕಿಸ್ಯಾಳ್ರಿ ಗಂದದ ಬೈರಿಗಿ ಜೀನಾ || ೧ ||

ಆವಾಯ್ ಕೇಳಿ ನೋಡಲಿಕ್ಕೆ ಬಂದಾರ ಬಹು ಜನಾ
ಮಕ್ಕಳಿಗಾಗಿ ಮರಾ ಮರಗೀತ ಬಹು ಜನಾ
ಮಕ್ಕಳಿಗಾಗಿ ಹೊರಹೊಂಟಾಳೊ ವನವಾಸನಾ
ಬೂಮಿಯ ಬಗದು ನೋಡಿದಾಳ್ರಿ ನೀರಿನಂತರಣಾ
ಅವರ ಬಾವಕ್ಕ ಮೆಚ್ಚಿ ಶಿವಾಕೊಟ್ಟ ಮಕ್ಕಳ ಪಲನಾ
ಗಂಡುಮಗನ್ನ ಹಡದು ಹೆಸರಿಟ್ಟಾರ ಕುಮಾರಸ್ವಾಮಿನಾ || ೨ ||

## ೧೨ ಸೂಳೇರ ಸಾವಾಸಾ

ಮಾಡಬಾರದು ಮಾಡಬಾರದು ಸೂಳೇರ ಸಾವಾಸಾ
ಎಂದಲ್ಲದೊಂದಿನ ಆದಿತ್ರಿ ಮೋಸಾ ॥ ೧ ॥

ಈಗೀನ ಸೂಳೇರಿಗೆ ಕಿವಿ ತುಂಬ ತೊಲಿ
ತೂತಿಗೆ ಇಡುತಾರೆ ಜೋಗೇ ಬೋಲಾಕಿ ॥ ೨ ॥

ಸಂಜಿಗೆ ಕೊಡತಾಳ್ರಿ ಮಾಯದ ಸುಣ್ಣಾ
ಮುಂಜೇಲಿ ಕೊಡತಾಳ್ರಿ ಮೈತುಂಬ ಹುಣ್ಣಾ ॥ ೩ ॥

## ೧೩ ತೇರು ಸಾಗುತತಿ

ಆರು ಚಕ್ರದಾ ಗಾಲಿಯ ತೊಡಿಸಿ
ಕಟ್ಟಿಸ್ಯಾರ ನೆಲಿಗಳನಾ
ಮ್ಯಾಲೆ ಇಟ್ಟಾರೆ ಬಂಗಾರದ ಕಳಸವನಾ ।

ಬಾಜಾರ ಹಿಡದು ತೇರು ಸಾಗುತತಿ
ನೋಡರಿ ಮಜಕುರನಾ
ತೇರಿನ ಸುತಮುತ್ತ ಶಂಕುಜಾಗಟೆ
ನೋಡರಿ ದಾಸರನಾ
ಗೆಣಿಯಾ ಗೆಣತಿ ಕೂಡಿ ಸೂರಿ ಮಾಡುತಾರೆ
ಹಣ್ಣು ಕಾಯಿ ದವನಾ ।

## ೧೪ ಮಕ್ಕಳುಂಟು ಮಲಿ ಇಲ್ಲ

ಕೋಲು ಕೋಲೆನ್ನ ಕೋಲೆ
ಸಿರಿಗಂದದಿ ಕೋಲು ಕೋಲೆನ್ನ ಕೋಲೆ

ಬಡಗಿ ಕಟ್ಟಿದಾಸವ್ವ ಬೆಡಗಿನ ಮಾಳಿಗಿ
ಕಂಬಗಳುಂಟೊ ತೊಲಿ ಇಲ್ಲೆ । ಕೋಲು.......... ..... ॥ ೧ ॥

ಕೊಪ್ಪಳ ಸೂಳಿಗಿ ಒಪ್ಪೆಂಟು ಕಿವಿ ಉಂಟು
ಮಕ್ಕಳು ಉಂಟು ಮಲಿ ಇಲ್ಲೆ | ಕೋಲು........... || ೨ ||

ಮಕ್ಕಳು ಉಂಟು ಮಲಿ ಇಲ್ಲ  ಈ ಮಾತು
ಅಕ್ಕಾರು ಕುಂತೀರಿ ಒಡದ್ಹೇಳ್ರಿ | ಕೋಲು............* || ೩ ||

## ೧೫ ಸೂಳಿಗ್ಯಾರ ಜಕ್ಕಾ

ಸೂಳಿಗ್ಯಾರ ಜಕ್ಕಾ
ಸೂಳೇರ್ ಮನಿ ಹೊಕ್ಕಾ
ಅವಳಿಗೆ ಕೊಟ್ಟಾದ್ದೆ
ಎಂಟಾಣೆ ರೊಕ್ಕಾ
ನಮ್ಮಪ್ಪ ಬೈತಾನೆ
ತಾ ನನ್ನ ರೊಕ್ಕಾ
ನಿನ್ ಬಕ್ ಬಾರಲೆ ಇಕ್ಕಾ
ಸೂಳಿಗೆ ಕೊಟ್ಟದ್ದೆ ಪಡಿಪಾವು ಜ್ವಾಳಾ
ಹಾಳಾಗಿ ಹೋತರಿ ನಮ್ಮನಿತಾನಾ

## ೧೬ ಅಳಬ್ಯಾಡೋ ನನ ಕಂದಾ

ನೀ ಅಳಬ್ಯಾಡೊ ನನ ಕಂದಾ
ನಾ ಸಂತೀಗಿ ಹೋಗಿ  ಬರತೇನೊ | ನೀ  ಅಳಬ್ಯಾಡೊ.... || ೧ ||

ನಾ ಸಂತೀಗಿ  ಹೋಗಿ ಬರತೇನೋ | ನಿನಗ
ಮಂಡಾಳ್ಳ  ಉಂಡಿ ತರತೇನೊ | ನೀ ಅಳಬ್ಯಾಡೊ.... || ೨ ||

ಪ್ಯಾಟಗಿ ಹೋಗಿ ಬರತೇನೊ | ನಿನಗ
ಮಕಮಲ್ಲಿನಂಗಿ ತರತೇನೊ | ನೀ ಅಳಬ್ಯಾಡೊ ... ....... || ೩ ||

೧೪—೧—ಮೂಗು
೨—ಕೋಳಿ

ಬಾಜಾರಕ್ಹೋಗಿ ಬರತೇನೊ। ನಿನಗ
ಬಾಳೀಹಣ್ಣ ತರತೇನೊ। ನೀ ಅಳಬ್ಯಾಡೊ.... ...... ॥ ೪ ॥

## ೧೭ ತಾಯಿಮುಂದ ಹೇಳತಾಳ

ನಾಗರ ಪಂಚಮಿ ಬಂದೀತೆಂದು
ನಾರಿ ಚಿಂತಿ ಮಾಡತಾಳ
ತೌರ ಮನಿಗಿ ಇಟ್ಬಾಳಾಕಿ ಕಣ್ಣಾ ಕಣ್ಣಾ
ತೌರ ಮನೀ ಕಡೇಲಿಂದ
ಯಾರೊಬ್ರು ಬರಲಿಲ್ಲ
ಯಾಕ ನಿಂತಿದ್ದಾನೆ ನಮ್ಮ ಅಣ್ಣಾ ಅಣ್ಣಾ ॥ ೧ ॥

ಆಕಿ ಕುಂಟಾಳಾದೆಟ್ಹಾಕಿ
ಅಣ್ಣ ಬಂದಾನಾದನ ಹೊತ್ತು
ಅಣ್ಣನ ಕಂಡ ಹಿಗ್ಗ್ಯಾಳೊ ಹಿರಿ ಹಿರಿ
ಹಿಡಿಯೋ ಎಣ್ಣಾ ಕಾಲಿಗಿ ನೀರಾ
ತಾರೊ ನಿನ್ನ ಸ್ವಾಮಾನಾ
ಗಂಡಗ ಹೇಳತಾಳ ಸಬ ತಗಿ ತಗಿ ॥ ೨ ॥

ಗಂಡನ ಮನಿ ಸುದ್ದಿ ಓದ
ತೌರ ಮನ್ಯಾಗ ಕುಂತುಗೊಂಡ
ತಾಯಿ ಮುಂದ ಹೇಳತಾಳ ತಿದ್ದಿ ತಿದ್ದಿ

॥ ೩ ॥

## ೧೮ ಕಾಲು ಜಾರಿ ಬಿದ್ದಾರ್

ಬಸವಣ್ಣನ ಗುಡಿಮುಂದ ಹಸವಿಲ್ಲದ ಬಾವಿ
ನೀರ ತರುವರು ಮನಪೂರಾ
ನೀರಿಗೆ ಹೋಗುತಾರ್ ಅಕ್ಕ ತಂಗೇರಾ ॥ ೧ ।

ಅಕ್ಕ ನಿಂತಾಳೊ ಬಾವಿ ದಂಡಿಮ್ಯಾಲಾ
ತಂಗಿ ತುಂಬತಾಳ ನೀರಾ
ಕಾಲು ಜಾರಿ ಬಿದ್ದಾರ್ ಅಕ್ಕ ತಂಗೇರಾ ॥ ೨ ॥

ಬಾಲ್ಯಾಳ ಹೆಣಗಳ ಬಾಜಾರಕ್ಕೆಳಸಿ
ಹೊಡಸ್ತಾರ ಗೂಡಾರಾ
ಹೋಲಿಕೆ ಚಂಗಳೆವ್ನ ಆಕಾರ ॥ ೩ ॥

ತಳವಾರ ಹೋಗಿ ತಾಕೀತ್ ಮಾಡಿದಾನ,
ಪತ್ರ ಹೋದಿತು ಧಾರ್ವಾಡಾ
ಸುಬೇದಾರ ಅಂದಾನ ಕಣ್ಣಿಗಿ ನೀರಾ ॥ ೪ ॥

ಬತ್ತಾಲ ಗುದರ್‍ಯೊಂದು ಹತ್ತೀಗೊಂಡು
ಬಿಟ್ಟನಣ್ಣ ಧಾರ್ವಾಡಾ
ಸುಬೇದಾರ ತಂದಾನ ಕಣ್ಣಿಗೆ ನೀರಾ ॥ ೫ ॥

ಹಿರೇಕಿ ಗಂಡನ ಕರದು ಕೇಳತಾಗೆ
ಎದರು ಇಲ್ಲೋ ಯಾರಾ
ಊರಾಳ ಜನರು ಬೆಲ್ಲದಾ ನೀರಾ ॥ ೬ ॥

## ೧೯ ... ಅಲ್ಲವೇ

ಗಾಳಿ ದೂಳಿಯೆಂಬದು ಮಳಿಯಲ್ಲವೆ। ಇದು
ಹರಿಯಾರ ಮುಂದಿನ ಹೊಳಿಯಲ್ಲವೆ ॥ ೧ ॥

ಕೊಟ್ಟೂರ ಸೆಂತಿ ಪಾಡಲ್ಲವೇ। ಅಲ್ಲಿ
ರೂಪಾಯ್ಕ ಒಂದು ಕಂಬಳೆಲ್ಲವೆ ॥ ೨ ॥

## ೨೦ ಗಬ್ಬು ಎದ್ದೆನ ನಮ್ಮಪ್ಪ

ಸಾಲಿಗೆ ಹುಡುಗರು ಬರಲಿಲ್ಲಾ
ಹಂಗೆ ಖಾಲಿ ಕುಂತರೆ ಹೊಟ್ಟೆಗಿಲ್ಲ

ಕಳೀವು ತಗಿಯಲಿಕ್ಕೆ ಹೋಗಂದರೆ
ನಮ್ಮ ದೇವ್ರಾಣೆ ನಮಗ ಬರೋದಿಲ್ಲ ||೧||

ಉಬ್ಬುಬ್ಬಿ ಹಡದೀರಿ ಯೋಳೆಂಟ
ನನ್ನವ್ವನ ಕೊರಳಿಗೆ ಗಂಟಪ್ಪ
ಹಬ್ಬ ಹುಣಮಿಯೊಳು ಹೋಳಿಗಿ ಕಾಣದೆ
ಗಬ್ಬು ಎದ್ದೆನ ನಮ್ಮಪ್ಪ ||೨||

## ೨೧ ಕಸಬರಿಗಿ

ಎಂಗಿ ಮಾತಾಡಿ ಏನ ತಿಳಕೊಂಡಿ
ಅಂಗಳ ಹುಡಗೋ ಕಸಬರಿಗಿ ||೧||

ಗಾಣದೆತ್ತಿನಂಗ ಗೋಣ ತಿರುವಲಿಬ್ಯಾಡ
ಕ್ವಾಣಿಯ ಹುಡಗೋ ಕಸಬರಿಗಿ ||೨||

ಹತ್ತರೊಳಗ ನೀ ಉತ್ತಮನಾಗೊ
ಕತ್ತಿ ಆಗಬ್ಯಾಡೊ ಕಸಬರಿಗಿ ||೩||

## ೨೨ ದುಡ್ಡು ಕೊಡತೀನೆಂದು

ಕೋಲೆ ರನ್ನಾದಿ ಕೋಲೆನ್ನ
ಏ ಮುದ್ದು ಏ ಕೋಲು ಕೋಲೆನ್ನ ||

ದುಡ್ಡು ಕೊಡತೀನೆಂದು ದೊಡ್ಡ ಮಾತಾಡ್ಯಾನೆ
ವಡ್ಡರ ಗೇ ರ್‍ಯಾಗ ಅಡಿಗ್ಯಾನೆ | ಕೋಲೆ...
ವಡ್ಡರ ಗೇರ್‍ಯಾಗ ಅಡಿಗ್ಯಾನೆ | ಮುದಿಯಪ್ಪನ
ಗಡ್ಡವ ಹಿಡದು ಎಳೆತಗ್ರಿ | ಕೋಲೆ.... ||೧||

ಕಾಸು ಕೊಡತೀನೆಂದು ಏಸೋ ಮಾತಾಡ್ಯಾನೆ
ಮ್ಯಾಸರ ಗೇರ್‍ಯಾಗ ಅಡಿಗ್ಯಾನೆ | ಕೋಲೆ
ಮ್ಯಾಸಾರ ಗೇರ್‍ಯಾಗ ಅಡಿಗ್ಯಾನೆ | ಹನುಮಪ್ಪನ
ಮೀಸ ಹಿಡದು ಎಳೆತಗ್ರಿ | ಕೋಲೆ.... ||೨||

## ೨೩ ಎಲ್ಲಾ ಒಂದೇ

ಕುಲಬೇದ ಮಾಡಬ್ಯಾಡ ಕುಲಗೇಡಿ ಹುಟ್ಟಿ
ಕುಲಗೇಡಿ ಹುಟ್ಟಿ ಇವ ಎಂತ ಎಟ್ಟಿ

ನೆಲ್ಲಕ್ಕಿ ಸವನಕ್ಕಿ ಸ್ಯಾವಿ ಅಕ್ಕಿ ಒಂದೇ
ಬಸ್ತ ಮಾಡಿದಾರ ಅನ್ನೆಲ್ಲಾ ಒಂದೇ | ಕುಲಬೇದ.

ಮೆಣಸು ಮೆಣಸಿನಕಾಯಿ ಕಾರೆಲ್ಲ ಒಂದೇ
ಕಾರೆಲ್ಲಾ ಒಂದೆ ದೂರಲಿಂದ ತಂದೆ | ಕುಲಬೇದ

ನಾಗರಹಾವು ಕ್ಯಾರಿ ಹಾವು ಹಾವೆಲ್ಲಾ ಒಂದೇ
ಎರಡು ಕಚ್ಚಿದರ ವಿಷವೆಲ್ಲ ಒಂದೇ | ಕುಲಬೇದ ..

## ೨೪ ಸೂಳೇರು....ಬರುವರು

ಹುಬ್ಬಳ್ಳಿ ಕೆರಿಬಾವಿ | ಜಂಗಮಾ
ನೀರಿಗೊಬ್ಬಳೆ ಹೋಗಲಾರೆ | ಜಂಗಮಾ

ಕೊಟ್ಟೂರ ಸೂಳೇರು | ಜಂಗಮಾ
ಪಡೀ ಹಿಟ್ಟಿಗೆ ಬರುವರು | ಜಂಗಮಾ

ಹಳ್ಳೀಯ ಸೂಳೇರು | ಜಂಗಮಾ
ಪಡಿ ಹುಳ್ಳಿಗೆ ಬರುವರು | ಜಂಗಮಾ

ಇದ್ದೂರ ಸೂಳೇರು | ಜಂಗಮಾ
ತಿಂಗಳುದ್ರಿಗೆ ಬರುವರು | ಜಂಗಮಾ

## ೨೫ ನಾಯಿ

ನಾಯಿ ಸಣ್ಣದು ಗುಣಾ ದೊಡ್ಡದು
ಏನಾತ ಮನಿಯೊಳು ಮೆಕ್ಕಿ ನಾಯಿ

ಚಾವಡ್ಯಾಗ ಕುಂತುಗೊಂಡ ಚಾಡಾ ಹೇಳತತಿ
ಚಾಡಗಾರ ಗೌಡರ ನಾಯಿ | ನಾಯಿ ಸಣ್ಣದು

ಹಾದ್ಯಾಗ್ ಹೋಗವರ್ನ ಹಾದಿ ಕಟ್ಟತತಿ
ಕೂಳ ಹೆಚ್ಚು ಕುರುಬರನಾಯಿ | ನಾಯಿ ಸಣ್ಣದು

ನೆರಿಕ್ಯಾಗ ಕುಂತಗೊಂಡು ಗೊರಕಿ ಹೊಡೀತತಿ
ಬೆರಕೀದೈತೀ ಬ್ಯಾಡರ ನಾಯಿ | ನಾಯಿ ಸಣ್ಣದು

## ೨೬ ಕಲ್ಲು

ಸ್ವರ್ಗಲೋಕಕ ಮಾರ್ಗ ಹಿಡಿದಿತೊ
ಚಮರ ಕೇಳೋ ಗದ್ದಿಗಿ ಕಲ್ಲಾ || ೧ ||

ಅಕ್ಕಾಲಿ ಕಮ್ಮಾರು ಅಣ್ಣ ತಮ್ಮಾರು
ಪೂಜಿ ಮಾಡುವರಡಿಗಲ್ಲಾ || ೨ ||

ಕಿರಾಣಿ ಮಾರೊ ಅಂಗಡಿಕಾರಗೆ
ಮೊದಲಬೇಕು ಸೇರಿನ ಕಲ್ಲಾ || ೩ ||

ವಕ್ಕಲಮಗ ನೋಡು ಹೊಲಕ ಹೋದರ
ಮದಲ ಕವಣಿಕಲ್ಲಾ || ೪ ||

ಕಲ್ಲ ಒಗೆದು ಕುಡಗೋಲ್ ಹಿಡಿದು
ಮಸಿಲಿಕ್ಕೆ ತಂದಾನ ಮಸಗಲ್ಲಾ || ೫ ||

ಗುಡ್ಡಗವ್ವರಕ್ಹೋಗಿ ವಡ್ಡ ತಂದಾನೊ
ಸರ್ವ ಜನರು ಬೀಸುವ ಕಲ್ಲಾ || ೬ ||

ಮೂಲ್ಯಾಗ ಕುಂತಗೊಂಡು ಮುದುಕಿ ಹೇಳತಾಳ
ಇಲ್ಲೆ ಐತಿ ದ್ಯಾಸಿಯ ಕಲ್ಲಾ || ೭ ||

ಪುಣ್ಯವಂತರು ಕೆರಿಯ ಕಟ್ಟಸ್ತಾರೆ
ಮವಲಿಗ್ಹಾಕೊ ಪಾಯದಕಲ್ಲಾ || ೮ ||

ಮೂನ್ನೂರರವತ್ತು ಅಳತಿಪ್ರಮಾಣಕ್ಕ
ತಂದು ನಿಲಿಸ್ಯಾರೊ ಮೈಲಿಯಕಲ್ಲಾ ॥ ೯ ॥

ಕೆರಿಯು ಮುಗಿದು ತಯಾರಾದ ಮ್ಯಾಲ
ತಂದು ಹಾಕ್ಯಾರೊ ತೂಬಿನಕಲ್ಲಾ ॥ ೧೦ ॥

## ೨೭ ಅಕ್ಕ ತಂಗೆಮ್ಮನ ಕೊಡಬೇಕು

ತಂದಂದು ನಾನೂ ತಂದೂ ನಾನಾ
ತಾನಂದು ನಾನೂ ತಂದೂ ನಾನಾ ॥

ಚಿಕ್ಕತ್ತಿ ಚಿಕ್ಕ ಮಾವ
ಚಿಕ್ಕ ಗೋದಿಯ ಕಲ್ಲು
ಚಿತ್ತಾರ ದೊಣಿಕಿ ನೆಲವಳ್ಳಿ
ಚಿತ್ತಾರ ದೊಣಿಕಿ ನೆಲವಳ್ಳಿದ್ದ ಮನಿಗಿ
ಚಿಕ್ಕ ತಂಗೆಮ್ಮನ ಕೊಡಬೇಕು । ತಂದಂದು....

ಹಿರಿಯತ್ತಿ ಹಿರಿ ಮಾವ
ಹಿರಿಯ ಗೋದಿಯ ಕಲ್ಲು
ಹರಿಯಾರನೊಣಿಕಿ ನೆಲವಳ್ಳ
ಹರಿಯಾರದೊಣಿಕಿ ನೆಲವಳ್ಳಿದ್ದ ಮನಿಗಿ
ಹಿರಿಯ ಅಕ್ಕಮ್ಮನ ಕೊಡಬೇಕು । ತಂದಂದು....

## ೨೮ ಪ್ರಾಯ ತುಂಬತತಿ ಶಿವಮುಟ್ಟಿ

ಬಿದ್ದರ ಬಿಳಿ ಎಲಿ
ಬಿಳಿ ಅಂಗಿ ಭೀಮನ
ವಜ್ಜರವ ಡೋಲು ಬಡಿಯಲಿ
ವಜ್ಜರದ ಡೋಲು ಬಡಿಯಲಿ । ಭೀಮಗ
ಕುಂಬರ ? ದೋಸ ಮುರಿಯಲಿ

ಅಣ್ಣ ಸಲಿಕಿ ತಾರೊ
ತಮ್ಮ ಗುದ್ದಲಿ ತಾರೊ
ರನ್ನದ ಕುಣಿಯ ಕಡಿವೇನೊ
ರನ್ನದ ಕುಣಿಯ ಕಡಿವೇನೋ | ಭೀಮಗ
ಚಿನ್ನದ ಮಣ್ಣು ಕೊಡುವೇನೊ

ಕೆರಿಯ ಕಟ್ಟಿ ವ್ಯಾರಿ
ಅರಿಯ ಸವಣಿ ಬಿತ್ತಿ
ಹಾಲು ತುಂಬುತಲೆ ಗಿಣಿಮುಟ್ಟಿ
ಹಾಲು ತುಂಬುತಲೆ ಗಿಣಿ ಮುಟ್ಟಿ | ಭೀಮಗ
ಪ್ರಾಯ ತುಂಬುತಲಿ ಶಿವಮುಟ್ಟಿ

—೦—

# ಶಬ್ದಕೋಶ

ಅಚ್ಚಿನ_ಹಚ್ಚನ್ನ
ಅಂಗಳು_ಗಂಟಲು
ಆಡಿವ್ಯಾಗಳ_ಅಡಿಮೆಯಲ್ಲಿಯ
ಇದು_ಯುದ್ಧ
ಇಬ್ರಳೆ_ಇಬ್ಬರೆ
ಈಗಂಬ_ಇಂದಿನ
ಉರುಳುತಾವೆ_ಉರಿಯುತ್ತವೆ
ಉಡಲ_ಒಡಲ
ಏಚಿ_ಯೋಚನೆ
ಒತ್ತೀಲಿ_ಬದಿಯಲ್ಲಿ
ಒಡಿಯ ಒಡೆಯ
ಕಲತಿತ್ತು_ಕೂಡಿತ್ತು
ಕಡಬುಶಕಿ_ಒಂದು ಊರಿನ ಹೆಸರು
ಕಲಿಯೋನು_ಕೂಡೋಣು
ಕಡಿಯಳ_ಕಡೆಯ
ಕಾತ್ರಿ_ಖಾತ್ರಿ
ಕಾರೇ_ಕಾರ್ಯ
ಕಾವಳದಾಗ_ಕತ್ತಲದಾಗ
ಕಾದೂಗಾ_ಕಾಗದ
ಕುತ್ತಿನ್_ಕುತ್ತಿಗೆಯ
ಕುತಾಸಂಗಿ_ಕುತನಿ ಅಂಗಿ
ಕುಂತಾಪಾದೆಟ್ಟಾಕಿ_ಯೋಚಿಸುತ್ತ ಕುಳಿತಳು
ಗಂಡ್ಯಾಗ_ಗುಡ್ಡದ ಬಾಗಿನಲ್ಲಿ
ಗಲೇಟಾತ್ರಿ_ಗಲಾಟೆ ಆತ್ರಿ
ಗಡ್ಲಿ_ದಡ
ಚತ್ತೀರ_ಕ್ಷತ್ರಿಯ
ಚುನ್ಲೇಳ_ಗುರುತು ಹೇಳು
ಚುಕ್ಕೇದು_ಗುಳಿಬಿದ್ದು
ಜತ್ತೀಲಿ_ಜೊತೆಯಲ್ಲಿ
ಜುಮನಾ_ಕಸಿ
ಡಬಸಕಲ್ಲು_ಒಂದು ಊರಿನ ಹೆಸರು
ತಾಂಡೇವು_ತಂಡ, ಗುಂಪು
ತೆಂಬ್‌ಗೊಂಡ_ತಂಬಿಗೆ ತೆಗೆದುಕೊಂಡು ಹೋಗುವ
ತೇಜಿ_ಕುದುರೆ
ದರಿಸ್ಯಾನ_ದರ್ಶನ
ದೀಪ್ಯೇಗ_ದೀಪದಲ್ಲಿ
ದೂಳಚೆಂಜೀಲಿ_ಗೋಧೂಳಿ ಸಮಯದಲ್ಲಿ

ದೋಸೇರ_ಜೋಯಿಸರ
ನಾಗಾರಿ_ನಗಾರಿ
ನೆಲಿಗಳನಾ_ಅಂತಸ್ತುಗಳನ್ನು
ಪಡುಮರಿಸಿ_ಅಪಬರಿಸಿ
ಪಡವಿ_ಪೊಡವಿ
ಪಟ್ಟೇರಕ್ತ_ಪಟ್ಟ, ದೇಣಿಗೆ,
ಪಾರ_ಕಾವಲು
ಬಂಗ_ಡಾಲು
ಬಸ್ದ, ಬಪ್ತ_ಬಸಿದು
ಬತ್ತದಂಗಡಿ_ಬತ್ತಾಸರದಂಗಡಿ
ಬ್ಯಾಣ, ಬಿಲನ್_ಬೇಗನೆ
ಬೋಲ್ಯಾಕಿ_ಜುಮಕಿ
ಬಾಸೆನ್ನ_ಭಾಷೆಯನ್ನು
ಮಳಿಗಳ_ಮೊಳೆಗಳನ್ನು
ಮನಿಗ್ಯಾನಲ್ಲಾ_ಮಲಗಿರುವನಲ್ಲಾ
ಮಖಾರ_ಹರೆಯ
ಮುನಾಸ_ಮುನಿಸು
ಮುನದಿಂದ ಮುನಿಸಿಕೊಂಡರೆ
ಮುಗ್ತೀಯ_ಮೂಗತಿಯ
ಮ್ಯಾಗಳ_ಮೇಲಿನ
ಮಾಗಳ_ಮಗಳು
ಮನಿಯಾಳ_ಮನೆಯಲ್ಲಿರುವ
ಮೂರತನಾಗ್ಯಾನೆ_ಮುಹೂರ್ತನಾಗಿದ್ದಾನೆ (ಕುಳಿತಿದ್ದಾನೆ).
ರೈತ_ರಕ್ತ
ರಾವುಳ, ರ್ಯಾವಳ_ರಾವಣ
ಲತ್_ನತ್ತು
ಲವಣಕೇರ್_ಒಂದು ಊರಿನ ಹೆಸರು
ವೋಟೆಯ_ಕಂಬ
ಸಬಾಸಲೆ_ಶಭಾಸ್ ಎಲೆ
ಸಕಾರಿ_ಸಕ್ಕರಿ

ಸಬಾಡಲೇನು_ಎಳೆದಾಡಲೇನು
ಸ್ಯಾರಾ_ಸೀರಿ
ಸ್ಯಾವಿ_ಸಾಂವಿ
ಸುಪಾಯ್_ಸಿಪಾಯಿ
ಸುರಿಗ್ಯಾಳೆ_ಚಲಿಸಿದಳು
ಸುಲಪಟ್ಟ_ಸಿಂಪಿಗ
ಸೂಳಿಗ್ಯಾರ_ಸೂಳೆಮಾಡುವವನು
ಸೆಳೆವು_ಚಳಿ
ಶ್ಯಾಲಿ_ಶಾಲು, ಬೆಲೆಯುಳ್ಳ ಸೀರಿ
ಹರಿಯಾರ_ಹರಿಹರ

# ಬೆಳ್ಳಿ ಬಿಟ್ಟ ಬಳ್ಳಿ

ಕರ್ನಾಟಕ ಏಕೀಕರಣದ ಬೆಳ್ಳಿಹಬ್ಬ ವನ್ನು ಕನ್ನಡ ಸಾಹಿತ್ಯ ಪರಿಷತ್ತು ವ್ಯಾಪಕ ವಾಗಿಯೂ, ವ್ಯವಸ್ಥಿತವಾಗಿಯೂ ಆಚರಿ ಸುತ್ತಿದೆ. ಅವರ ಸಂಬಂಧವಾಗಿ 'ಬೆಳ್ಳಿ ಬಿಟ್ಟ ಬಳ್ಳಿ' ಎಂಬ ಹೆಸರಿನ ಒಂದು ಹೊಸ ಪ್ರಕಟನ ಮಾಲೆಯನ್ನು ಪರಿಷತ್ತು ಕೈಗೊಂಡಿದೆ. ಈ ಮಾಲೆಯಲ್ಲಿ ಒಂದುನೂರಕ್ಕಿಂತ ಹೆಚ್ಚು ಪುಸ್ತಕಗಳನ್ನು ಪ್ರಕಟಿಸಲಾಗುತ್ತಿದೆ. ಜನಪದ ಸಾಹಿತ್ಯ, ಗ್ರಂಥ ಸಂಪಾದನೆ ವಿಮರ್ಶೆ, ಡಾಕ್ಟರೇಟ್ ಪ್ರಬಂಧ ಮೊದಲಾದವನ್ನು ಈ ಮಾಲೆಯಲ್ಲಿ ಪ್ರಕಟಿಸಲಾಗುತ್ತಿದೆ. ಕರ್ನಾಟಕ ಸರ್ಕಾರದ ಉದಾರ ಸಹಾಯ ಈ ಮಾಲೆಗೆ ದೊರೆತಿರುವುದರಿಂದ ಈ ಮಾಲೆಯಲ್ಲಿ ಪ್ರಕಟಿಸುವ ಪುಸ್ತಕಗಳ ಬೆಲೆಯನ್ನು ಎಲ್ಲರಿಗೂ ಎಟಕುವಂತೆ ಇಡಲಾಗಿದೆ. ಕಡಿಮೆ ಬೆಲೆಯಲ್ಲಿ ಉತ್ತಮ ಗ್ರಂಥಗಳನ್ನು ಕನ್ನಡಿಗರಿಗೆ ಸಿಗುವಂತೆ ಸಹಾಯ ನೀಡಿದ ಕರ್ನಾಟಕ ಸರ್ಕಾರವನ್ನು ಪರಿಷತ್ತು ಕೃತಜ್ಞತೆಯಿಂದ ಸ್ಮರಿಸುತ್ತದೆ.

ಹಂಪ. ನಾಗರಾಜಯ್ಯ
ಅಧ್ಯಕ್ಷರು



**ಕನ್ನಡ ಸಾಹಿತ್ಯ ಪರಿಷತ್ತು**
ಚಾಮರಾಜಪೇಟೆ, ಬೆಂಗಳೂರು - 18